# ದಿಗ್ಗಿ ಸಂಗಮನಾಥ : ಒಂದು ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ಕಿರುಪ್ರಬಂಧ)


ಸಂಶೋಧಕರು

ಅನುಪಮ ವೆಂ. ಆದಾಪುರ

ಮಾರ್ಗದರ್ಶಕರು

ಡಾ. ಕೆ.ರವೀಂದ್ರನಾಥ

ಪ್ರವಾಚಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ





ಭಾಷಾ ನಿಕಾಯ

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೂಡಲಸಂಗಮ

೨೦೦೯

# ದಿಗ್ಗಿ ಸಂಗಮನಾಥ : ಒಂದು ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ಕಿರುಪ್ರಬಂಧ)

ಸಂಶೋಧಕರು

ಅನುಪಮ ವೆಂ. ಆದಾಪುರ



ಮಾರ್ಗದರ್ಶಕರು

ಡಾ. ಕೆ.ರವೀಂದ್ರನಾಥ

ಪ್ರವಾಚಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ






ಭಾಷಾ ನಿಕಾಯ

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೂಡಲಸಂಗಮ

೨೦೦೮

# ದೃಢೀಕರಣ ಪತ್ರ

"ದಿಗ್ಗಿ ಸಂಗಮನಾಥ : ಒಂದು ಅಧ್ಯಯನ" ಎಂಬ ಸಂಶೋಧನಾ ಕಿರು ಪ್ರಬಂಧವನ್ನು ಅನುಪಮ ವೆಂ. ಆದಾಪೂರ ಇವರು ಎಂ.ಫಿಲ್ ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ.

ಪ್ರಸ್ತುತ ವಿಷಯ ಕುರಿತು ಯಾವುದೇ ವಿಶ್ವವಿದ್ಯಾಲಯದಲ್ಲಿ ಇಡಿಯಾಗಿ ಇಲ್ಲವೇ ಬಿಡಿಯಾಗಿ ಅಧ್ಯಯನ ನಡೆದಿರುವುದಿಲ್ಲ. ಇದು ಎಂ.ಫಿಲ್ ಪದವಿಗೆ ಅರ್ಹವಾಗಿದೆ ಎಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 8/10/09

(ಡಾ. ಕೆ.ರವೀಂದ್ರನಾಥ)

ಮಾರ್ಗದರ್ಶಕರು ಮತ್ತು ಪ್ರವಾಚಕರು

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ "ದಿಗ್ಗಿ ಸಂಗಮನಾಥ : ಒಂದು ಅಧ್ಯಯನ" ಎಂಬ ಸಂಶೋಧನ ಕಿರು ಪ್ರಬಂಧವು ಡಾ. ಕೆ.ರವೀಂದ್ರನಾಥ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ನನ್ನ ಸ್ವಂತ ಅಧ್ಯಯನವಾಗಿದೆ.

ಈ ಪ್ರಬಂಧವನ್ನು ನಾನು ಈ ಮೊದಲು ಯಾವುದೇ ಪದವಿಗಾಗಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ದಿನಾಂಕ : 8-10-09

ಸ್ಥಳ : ವಿದ್ಯಾರಣ್ಯ

(ಅನುಪಮ ವೆಂ. ಆದಾಪುರ)
ಸಂಶೋಧನ ವಿದ್ಯಾರ್ಥಿ

# ಅರಿಕೆ

ಶರಣ ಪರಂಪರೆಯ ವಾರಸುದಾರಿಕೆಯನ್ನು ವ್ರತವೆಂಬಂತೆ ಆಚರಿಸುವುದರ ಮೂಲಕ ಕನ್ನಡ ನಾಡಿನಲ್ಲಿ ಬಸವಕಲ್ಯಾಣದ ಪರ್ಯಾಯ ನಾಮಗಳಾಗಿ ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ ಹಾಗೂ ಕಡೆಯಕಲ್ಯಾಣ ಎಂಬ ಹೆಸರಿನಿಂದ ಶರಣ ಚಳುವಳಿಯನ್ನು ಮುಂದಿನ ೫೦೦ ವರ್ಷಗಳ ಕಾಲ ಆಚರಣೆಗೆ ತರುವ ಪ್ರಯತ್ನ ನಡೆಯಿತು. ಈ ಪ್ರಯತ್ನದ ಪ್ರಮುಖ ವ್ಯಕ್ತಿ ದಿಗ್ಗಿ ಸಂಗಮನಾಥ.

ಸಂಗಮನಾಥನ ಗುರುಗಳು ಪರಮಾನಂದರು. ಶಿಷ್ಯರು ಕೊಡೇಕಲ್ ಬಸವಣ್ಣನ ಪರಂಪರೆಯವರು. ಹೀಗಾಗಿ ದಿಗ್ಗಿ ಸಂಗಮನಾಥನ ಸಾಧನೆ ಅತಿ ಮಹತ್ವದ್ದಾಗಿ ಕಂಡುಬರುತ್ತದೆ. ಕಾರಣ ದಿಗ್ಗಿ ಸಂಗಮನಾಥ ಒಂದು ಅಧ್ಯಯನ ಎಂಬ ವಿಷಯವನ್ನು ಎಂ.ಫಿಲ್ ಪದವಿಗೆ ಆಯ್ಕೆ ಮಾಡಿಕೊಂಡಿದ್ದೇನೆ.

ಈ ಅಧ್ಯಯನಕ್ಕೆ ವಿಷಯ ಸೂಚಿಸಿದವರು ಕರ್ನಾಟಕದ ಶ್ರೇಷ್ಠ ಸಂಶೋಧಕರಾದ ಡಾ. ಎಂ.ಎಂ. ಕಲಬುರ್ಗಿಯವರು. ಅವರಿಗೂ ಮತ್ತು ಈ ವಿಷಯಕ್ಕೆ ಮಾರ್ಗದರ್ಶಕರಾಗಿ ಪ್ರಬಂಧಕ್ಕೆ ಅಧ್ಯಯನ ಪೂರ್ಣ ಸ್ವರೂಪವನ್ನು ತಂದುಕೊಡುವಲ್ಲಿ ಕಾರಣರಾದ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರವಾಚಕರು ಮತ್ತು ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರದ ಸಂಸ್ಥಾಪಕ ಮುಖ್ಯಸ್ಥರು ಆದ ಡಾ. ಕೆ.ರವೀಂದ್ರನಾಥ ಗುರುಗಳಿಗೆ ನನ್ನ ಅನಂತ ಕೃತಜ್ಞತೆಗಳು.

ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರದ ಈಗಿನ ಮುಖ್ಯಸ್ಥರಾದ ಡಾ. ಎಸ್.ಎಸ್.ಅಂಗಡಿ ಮತ್ತು ಹಸ್ತಪ್ರತಿ ಶಾಸ್ತ್ರ ವಿಭಾಗದ ಪ್ರಾಧ್ಯಾಪಕರುಗಳಾದ ಡಾ. ವೀರೇಶ ಬಡಿಗೇರ, ಡಾ. ಎಫ್.ಟಿ.ಹಳ್ಳಿಕೇರಿ, ಡಾ. ಎಸ್.ಆರ್.ಚನ್ನವೀರಪ್ಪ ಅವರುಗಳ ವಿದ್ವತ್ ಪೂರ್ಣ ಸಲಹೆಯನ್ನು ಸ್ಮರಿಸದೆ ಇರಲಾರೆ.

ಈ ಅಧ್ಯಯನಕ್ಕೆ ಸಲಹೆ, ಸಹಕಾರ ನೀಡಿದ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘದ ಕಾರ್ಯಾಧ್ಯಕ್ಷರಾದ ಶ್ರೀ ವೀರಣ್ಣ ಚರಂತಿಮಠ ಹಾಗೂ ಸಂಘದ ಆಡಳಿತ ಮಂಡಳಿಯ ಸರ್ವಸದಸ್ಯರುಗಳಿಗೂ, ನಮ್ಮ ಮಹಾವಿದ್ಯಾಲಯದ ಪ್ರಾಚಾರ್ಯರಾದ ಶ್ರೀಮತಿ ಎಸ್.ಎಲ್.ಶೆಟ್ಟರ್ ಅವರಿಗೆ ಕೃತಜ್ಞತೆಗಳು. ಗುರುಗಳಾದ ಡಾ.ಬಿ.ಕೆ.ಹಿರೇಮಠ, ಡಾ. ಜಿ.ವೀರಭದ್ರಗೌಡ, ಡಾ. ಜಿ.ಆಯ್.ನಂದಿ ಕೋಲಮಠ, ಶ್ರೀ ಆರ್.ಅಯ್.ಗೌಡರ, ಮಹಾವಿದ್ಯಾಲಯದ ಶಿಕ್ಷಕ ಶಿಕ್ಷಕೇತರ ಸಿಬ್ಬಂದಿಗಳಿಗೆ

ನನಗೆ ಸದಾ ಪ್ರೋತ್ಸಾಹಿಸುತ್ತಿರುವ ತಂದೆ ವೆಂಕಣಗೌಡ, ತಾಯಿ ಜಯಶ್ರೀ, ಚಿಕ್ಕಪ್ಪ ಡಾ. ಅನ್ನದಾನಿ ನರೇಗಲ್, ಚಿಕ್ಕಮ್ಮ ಕಮಲಾ, ಶಾಂತಾ, ಮಾವನವರಾದ ಶ್ರೀ ವೆಂಕಣಗೌಡ, ಉಮೇಶ, ಸಹೋದರಿಯರಾದ ದೊಡ್ಡಬಸಮ್ಮ, ಸಾವಿತ್ರಿ, ಲಕ್ಷ್ಮಿ, ನಾಗು, ಶೃತಿ, ಸಹೋದರರಾದ ಮಾಂತೇಶ, ನಿಖಿಲ್, ಸೋಮು, ನರೇಂದ್ರ, ಕಲ್ಲಯ್ಯ ಹಿರೇಮಠ, ಜೆ.ಕುಮಾರ್, ಸ್ನೇಹಿತೆಯಾದ ಸಂಗೀತಾ ಅವರಿಗೂ ನನ್ನ ನಮನಗಳು.

ಜಿ.ಎಸ್.ದೇಸಾಯಿ, ದೇವಯ್ಯಸ್ವಾಮಿ, ದಿಗ್ಗಿ ಗ್ರಾಮಸ್ಥರಿಗೂ ಹಾಗೂ ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರದ ಬೋಧಕೇತರ ಸಿಬ್ಬಂದಿಯವರಾದ ಸಂಗಮೇಶ ಚೌದರಿ, ವಾಲೀಕಾರ ಮತ್ತು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಶಾಸ್ತ್ರ ವಿಭಾಗದ ಸಿಬ್ಬಂದಿ ವೀರಪ್ಪ ಅವರಿಗೆ ನನ್ನ ನಮನಗಳು.

ಅನುಪಮ ವೆಂ. ಆದಾಪುರ

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಅಗತ್ಯ ಮತ್ತು ಸ್ವರೂಪ

### ಅಧ್ಯಯನದ ಅಗತ್ಯ

ಇತ್ತೀಚಿಗೆ ನಮ್ಮ ಅಧ್ಯಯನಗಳ ಆಲೋಚನೆಗಳು ಬೇರೆಯಾಗಿವೆ. ಮಹತ್ವದ ವ್ಯಕ್ತಿ, ಮಹತ್ವದ ವಸ್ತು ಮತ್ತು ಮಹತ್ವದ ಸಾಹಿತ್ಯಕ್ಕಿಂತ ಈಚೆ ಬಂದು ಉಪೇಕ್ಷಿತ ವ್ಯಕ್ತಿ, ವಸ್ತು ಮತ್ತು ಸಾಹಿತ್ಯದ ಕಡೆಗೆ ನಮ್ಮ ಅಧ್ಯಯನಗಳು ನಡೆದಿವೆ. ಇದಕ್ಕೆ ಕಾರಣ ನಿಜವಾದ ಚರಿತ್ರೆಯ ಅಂಶಗಳು. ನಾವು ಉಪೇಕ್ಷಿಸಿದ ಕ್ಷೇತ್ರಗಳಲ್ಲಿ ನೆಲದ ಮರೆಯ ನಿಧಾನದಂತೆ ಅವಿತುಕೊಂಡಿರುವುದು ಈಗಾಗಲೇ ನಡೆದ ಅಧ್ಯಯನಗಳಿಂದ ಮನವರಿಕೆಯಾಗಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನದಿಂದ ಉಪೇಕ್ಷಿತಗೊಂಡ ದಿಗ್ಗಿ ಸಂಗಮನಾಥನನ್ನು ಕುರಿತು ಪ್ರಸ್ತುತ ಕಿರು ಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನ ಒಂದು ಮಹತ್ವಪೂರ್ಣ ಘಟ್ಟವಾಗಿದೆ. ಕಲ್ಯಾಣದ ಶರಣರಲ್ಲಿ ಬಸವಣ್ಣನವರ ಸ್ಥಾನ ಹಿರಿದಾದುದು. ಕ್ರಾಂತಿಕಾರಿ ಬಸವಣ್ಣನವರು ಸಮಾಜಕ್ಕೆ ಅಂಟಿಕೊಂಡಿದ್ದ 'ಸ್ಥಾವರತ್ವ'ದ ಜಾಡ್ಯವನ್ನು ತೊಡೆದು 'ಜಂಗಮತ್ವ'ದ ಮೌಲ್ಯಗಳನ್ನು ನಾಡಿನ ದೆಸೆದೆಸೆಗೂ ಹರಡಿದರು. ಇದರಿಂದ ಎಲ್ಲೆಡೆಯಲ್ಲಿದ್ದ ಶರಣರನ್ನು ಆಕರ್ಷಿಸಿಕೊಂಡು ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಕಟ್ಟಿ ಶೂನ್ಯ ಸಿಂಹಾಸನದ ಅಧಿಪತಿಯನ್ನಾಗಿ ಹಿರಿಯಜ್ಞಾನಿ ಪ್ರಭುದೇವರನ್ನು ನೇಮಿಸಿ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸಲು ಸೂಕ್ತವಾದ ವೇದಿಕೆಯಾಯಿತು. ತುಳಿತಕ್ಕೊಳಗಾಗಿದ್ದ ಕೆಳವರ್ಗದ ಜನತೆಯನ್ನು ಮೇಲ್‌ಸ್ತರಕ್ಕೆ ತಂದ ಕೀರ್ತಿ ಕಲ್ಯಾಣ ಬಸವಣ್ಣನಿಗೆ ಸಲ್ಲುತ್ತದೆ.

ಕಲ್ಯಾಣದ ಬಸವಣ್ಣನ ಅಂಕಿತನಾಮವಾದ ಕೂಡಲಸಂಗಮನಾಥನ ಹೆಸರನ್ನು ಧರಿಸಿಕೊಂಡಿದ್ದ ದಿಗ್ಗಿ ಸಂಗಮನಾಥನ ಪ್ರಭಾವ ಒಂದು ಪರಂಪರೆಯನ್ನು ನಿರ್ಮಿಸಿತು. ಬಸವಕಲ್ಯಾಣದ ನಂತರ ಹಂಪೆಯ ಪ್ರೌಢರಾಯನ ಆಳ್ವಿಕೆಯಲ್ಲಿ ಅಸ್ತಿತ್ವಕ್ಕೆ ಬಂದ ವಿಜಯಕಲ್ಯಾಣ ಸಾಹಿತ್ಯಿಕವಾಗಿ ವಚನಾಗಮವನ್ನು ಸೃಷ್ಟಿ ಮಾಡಿತು. ಆ ತರುವಾಯದ ದಿಗ್ಗಿಯ ಸಂಗಮನಾಥ ಅಮರಕಲ್ಯಾಣದ ನೇತೃತ್ವವನ್ನು ವಹಿಸಿಕೊಂಡು

ಕಡೆಯಕಲ್ಯಾಣದ ಪರಿಸರದಲ್ಲಿ ಶಿಷ್ಯ ಪರಂಪರೆಯನ್ನು ಹುಟ್ಟುಹಾಕಿ ಕಾಲಜ್ಞಾನ ವಚನಗಳ ಸೃಷ್ಟಿಗೆ ಕಾರಣನಾದನು. ಈತನನ್ನು ಕುರಿತು ನಂದಿಯಾಗಮಲೀಲೆ, ಗುಂಡಬಸವೇಶ್ವರ ಚರಿತೆಯಂತಹ ದೇಶಿ ಕಾವ್ಯಗಳು ಮಹತ್ವದ ಸಂಗತಿಗಳನ್ನು ಬಿಚ್ಚಿಡುತ್ತವೆ. ವಿಶೇಷವಾಗಿ ಇದುವರೆಗೆ ಕೊಡೇಕಲ್ಲನ್ನು ಅಮರಕಲ್ಯಾಣವೆಂದು ಭಾವಿಸಿದ್ದ ನಮಗೆ ಅದು ಕಡೆಯಕಲ್ಯಾಣವಾಗಿ, ದಿಗ್ಗಿ ನಿಜವಾದ ಅಮರಕಲ್ಯಾಣವಾಗಿ ಇಂತಹ ಕಾವ್ಯಗಳಿಂದ ತಿಳಿದುಬರುತ್ತದೆ. ಇದರಿಂದ ದಿಗ್ಗಿ ಸಂಗಮನಾಥ ೧೨ನೇ ಶತಮಾನದ ವಚನಕಾರರ ವಾರಸುದಾರನಾಗಿ, ಮುಂದೆ ಕೊಡೇಕಲ್ಲ ಪರಂಪರೆಯ ನೇತಾರನಾಗಿ ಮಹತ್ವದ ಪಾತ್ರವಹಿಸಿದ್ದನ್ನು ಪ್ರಸ್ತುತ ಅಧ್ಯಯನದಲ್ಲಿ ದಾಖಲಿಸುವ ಉದ್ದೇಶವನ್ನು ಹೊಂದಲಾಗಿದೆ.

ಇಲ್ಲಿಯವರೆಗೆ ಕೊಡೇಕಲ್ಲ ಪರಂಪರೆಯ ಹುಟ್ಟಿಗೆ ಕಾರಣನಾದ ಸಂಗಮನಾಥನನ್ನು ಹಿಂದೆ ಸರಿಸಿ ಕೊಡೇಕಲ್ಲ ಪರಂಪರೆಯಲ್ಲಿ ಬರುವ ಬಸವಣ್ಣ, ರಾಚಪ್ಪಯ್ಯ, ವೀರಸಂಗಪ್ಪಯ್ಯ, ಮಂಟೇಸ್ವಾಮಿ ಆ ಪರಿಸರದಲ್ಲಿದ್ದ ತಿಂಥಿಣಿ ಮೋನಪ್ಪಯ್ಯನವರನ್ನು ಕುರಿತು ನಮ್ಮ ಅಧ್ಯಯನಗಳು ನಡೆದಿವೆ. ಈ ಎಲ್ಲಾ ಧಾರೆಗಳಿಗೆ ಅಡಿಗಲ್ಲಾಗಿರುವ ದಿಗ್ಗಿ ಸಂಗಮನಾಥನನ್ನು ಕುರಿತು ನಮ್ಮ ವಿದ್ವಾಂಸರು ಗಮನ ಹರಿಸಲಿಲ್ಲ. ಈ ಕಾರಣವು ನಮ್ಮ ಅಧ್ಯಯನದ ಉದ್ದೇಶವಾಗಿದೆ.

ಯಾವುದೇ ಪಂಥಕ್ಕೆ ಯುಗಧರ್ಮವೆಂಬುದು ಇರುತ್ತದೆ. ಈ ಹಿನ್ನೆಲೆಯಲ್ಲಿ ಒಂದೇ ಸಿದ್ಧಾಂತ ಹಲವು ಪಂಥಗಳಲ್ಲಿ ಅನೇಕಾಂತವಾದಗಳಂತೆ ಬೆಳವಣಿಗೆ ಹೊಂದಿರುತ್ತವೆ. ಈ ಬೆಳವಣಿಗೆಯ ಪ್ರಕ್ರಿಯೆಯನ್ನು ದಿಗ್ಗಿ ಸಂಗಮನಾಥನ ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ನಿರೂಪಿಸುವುದು ಈ ಸಂಶೋಧನೆಯ ಮತ್ತೊಂದು ಉದ್ದೇಶವಾಗಿದೆ.

ಅಮರಕಲ್ಯಾಣವು ೧೫-೧೬ನೇ ಶತಮಾನದ ಕಾಲಘಟ್ಟದಲ್ಲಿ ಅನಾವರಣಗೊಂಡಿದೆ. "ಕಲ್ಯಾಣವು ಇದು ಬಸವಾದಿ ಶರಣರ ತತ್ವಗಳನ್ನು ಹಾಗೂ ಕ್ರಿಯಾತ್ಮಕ ಬದುಕಿನ ಸಾಮಾಜಿಕ ಸಂಘರ್ಷವನ್ನು ನೆನಪಿಗೆ ತರುತ್ತದೆ. ಅಮರಕಲ್ಯಾಣ ಪರಂಪರೆಯು ಕೂಡಾ ಕಾಲದ ಸಂಘರ್ಷವನ್ನು ಎದುರಿಸಿ ಅಗತ್ಯವಾದ ತಾತ್ವಿಕ ಹುಡುಕಾಟವನ್ನು ನಡೆಸಿದ ಪ್ರಕ್ರಿಯಾತ್ಮಕ ಚಿಂತನೆಯೇ ಆಗಿದೆ."

ಮುಸ್ಲಿಂರ ದುರಾಡಳಿತದಲ್ಲಿ ಜನತೆ ಬದುಕುವುದು ಕಷ್ಟವಾದಂತಹ ಸಂದರ್ಭದಲ್ಲಿ ದಿಗ್ಗಿ ಸಂಗಮನಾಥನ ಆಗಮನವಾಯಿತು. ಆಗ ಸಗರನಾಡಿನಲ್ಲಿ ವಿಜಯನಗರದ ಅರಸರ, ಬಿಜಾಪೂರ ಆದಿಲ್‌ಶಾಹಿಗಳು, ಬಹುಮನಿ ಸುಲ್ತಾನರ ಮಧ್ಯದಲ್ಲಿ ಯುದ್ಧಗಳು ನಡೆದಿದ್ದವು. ಅಂತಹ ಕದನ ಪರಿಸರದಲ್ಲಿ ಬಾಳಿದ ದಿಗ್ಗಿ ಸಂಗಮನಾಥನ ಮೇಲೆ ಆ ಪರಿಸರದ ಪ್ರಭಾವ ದಟ್ಟವಾಗಿಯೇ ಆಗಿದೆ.

"ಬಸವಪೂರ್ವಯುಗದ ವೀರಶೈವದ ಮೇಲೆ ನಾಥ ಪಂಥದ ಪ್ರಭಾವ ಆಗಿರುವುದನ್ನು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ಆ ಯುಗದ ವೀರಶೈವ ಪ್ರಮುಖರಾದ ರೇವಣಸಿದ್ಧ, ಅಲ್ಲಮಪ್ರಭುದೇವ,

ಸಿದ್ಧರಾಮ ಇವರೆಲ್ಲ ತಮ್ಮ ಜೀವಿತದ ಪೂರ್ವಾರ್ಧದಲ್ಲಿ ನಾಥ ಪಂಥಕ್ಕೆ ವಾಲಿದವರೇ ಆಗಿದ್ದರೆಂದು ಹೇಳುವುದಕ್ಕೆ ಆಧಾರಗಳಿವೆ. ಹೀಗೆ ಇವರೆಲ್ಲರ ಮೇಲೆ ಪ್ರಭಾವ ಬೀರಿದ್ದ ನಾಥ ಪಂಥವು ಕಲ್ಯಾಣದ ಬಸವಣ್ಣನ ಕಾಲಕ್ಕೆ ಆತನ ಶರಣಧರ್ಮ ಸಂಸ್ಕೃತಿಯ ಪ್ರಖರತೆ, ಪ್ರಚಾರದೆದುರು ತಲೆಯೆತ್ತಿ ಬಾಳಲು ಸಾಧ್ಯವಾಗದೇ ಹೋಯಿತಾದರೂ ಕನ್ನಡ ನಾಡಿನಿಂದ ಸಂಪೂರ್ಣ ಕಣ್ಮರೆಯಾಗಲಿಲ್ಲ.

ಮೂರ್ತಿಪೂಜಕ ಶಿಷ್ಟಧರ್ಮಗಳೆಲ್ಲ ನಿರಾಕಾರ ಪೂಜಕ ಇಸ್ಲಾಮಿನ ಎದುರು ಈಸಲಾಗದೆ ಗಳಗಳನೇ ಮುಳುಗಿದ ಬಳಿಕ, ನಾಥಪಂಥದ ತಾಂತ್ರಿಕ ಮತಾಚಾರಗಳಿಗೆ ಚನ್ನಾಗಿ ಉಸಿರಾಡಲು ಅನುವು ದೊರೆತಿರಬೇಕು. ನಾಥದ ತಳಹದಿ ಸಾಕಾರ ಪೂಜೆಯ ನಿರಾಕರಣೆಯಾಗಿರುವುದರಿಂದ ಇದೇ ಧೋರಣೆಯ ಇಸ್ಲಾಮಿನ ಸಹಕಾರ ಸಲುಗೆ ಇದಕ್ಕೆ ಪ್ರಾಪ್ತವಾಗಿರಬೇಕು."[7]

ದಿಗ್ಗಿಯ ಸಂಗಮನಾಥನು ಆರೂಢ ಪಂಥಕ್ಕೆ ಸೇರಿದವನು. ಈತನ ಶಿಷ್ಯ ಕೊಡೇಕಲ್ ಬಸವಣ್ಣ, ಆತನ ಮಗ ರಾಚಪ್ಪಯ್ಯ, ವೀರಸಂಗಪ್ಪಯ್ಯನಂಥವರು ಈ ಪರಂಪರೆಯಲ್ಲಿ ಆರೂಢ ಪಂಥವನ್ನೇ ಸ್ವೀಕರಿಸಿದರು. ಈ ಎಲ್ಲ ಸಾಧಕರಿಗೆ ಬಾಹ್ಯ ಕುರುಹುಗಳು ಅಗತ್ಯಕ್ಕಿಂತ ಆಂತರಿಕ ನೆಲೆಗಳು ಮುಖ್ಯವಾಗುತ್ತವೆ. ಇಷ್ಟಲಿಂಗ ವಿರಹಿತವಾದ ದೃಷ್ಟಿಕೋನವನ್ನು ಮಂಡಿಸಿ ಆತ್ಮಲಿಂಗದ ಪ್ರೇಮದ ನಿಲುವನ್ನು ಹೊಂದುತ್ತಾರೆ.

"ಮರೆಮಾಡಿ ಬಂದಾನೆ ಲಿಂಗ ತನ್ನ ಕುರುಹು ತೋರಿ ತೊರೆದನೆ ಸಂಗ"[8] ಕೊಡೇಕಲ್ ಪರಂಪರೆಯಲ್ಲೂ ಕೂಡಾ ವ್ಯಕ್ತಿ ಮರೆಯಾಗಿ ತತ್ವದ ಮುಂಚೂಣಿಯಲ್ಲಿದ್ದು ಸಂಗಮನಾಥನು ಮುಂಚಲನೆಯಾಗಿರುವುದನ್ನು ಕಾಣಬಹುದು.

ಶರಣರ ಚರಿತ್ರೆಯಲ್ಲಿ ಕಲ್ಯಾಣಕ್ಕೆ ಚಾರಿತ್ರಿಕ ಮನ್ನಣೆ ಇದೆ. ಕಲ್ಯಾಣವೆಂಬುದು ಸ್ಥಳನಾಮವಾದಂತೆ ಸರ್ವಜನರ, ಸರ್ವಕಾಲೀನ ಅಭ್ಯುದಯವನ್ನು ಬಯಸುವ ತತ್ವವಾಗಿಯೂ ಅನ್ವರ್ಥನಾಮ ಹೊಂದಿದೆ. ಈ ಕಾರಣವಾಗಿ ಕರ್ನಾಟಕದಲ್ಲಿ ಕಟ್ಟುತ್ತ ಬಂದ ಕಲ್ಯಾಣಗಳಿಗೆ ಒಂದು ಪರಂಪರೆಯಿದೆ, ದೇಶಿ ಸೊಗಡಿದೆ, ಒಂದು ಸಿದ್ಧಾಂತವಿದೆ, ಜೊತೆಗೆ ಐತಿಹಾಸಿಕ ಮಹತ್ವವಿದೆ. ಈ ಕಾರಣವಾಗಿ ನಮ್ಮ ಕನ್ನಡ ಕಾವ್ಯಗಳಲ್ಲಿ ಸಮಯಕಲ್ಯಾಣ, ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ ಮತ್ತು ಕಡೆಯಕಲ್ಯಾಣ ಹೆಸರಿನ ಕಲ್ಯಾಣಗಳು ಹುಟ್ಟಿಕೊಂಡಿವೆ. ಆಯಾ ಕಾಲಘಟ್ಟದ ಪರಿಸರಕ್ಕೆ ತಕ್ಕಂತೆ ಅವು ಸಾಹಿತ್ಯ ಸಂಸ್ಕೃತಿಯ ಪರಿಚಲನಾ ಕೇಂದ್ರಗಳಾಗಿ ಹೆಸರು ಮಾಡಿವೆ. ಈ ಹಿನ್ನೆಲೆಯಲ್ಲಿ ಸಂಗಮನಾಥನ ಕಾರ್ಯಕ್ಷೇತ್ರವಾದ ದಿಗ್ಗಿ ಅಮರಕಲ್ಯಾಣವೆಂಬುದನ್ನು ಪ್ರತಿಪಾದಿಸುವುದು ಪ್ರಸ್ತುತ ಅಧ್ಯಯನದ ಮೂಲ ಉದ್ದೇಶವಾಗಿದೆ. ವಿದ್ವಾಂಸರಾದ ಡಾ.ಎಂ.ಎಂ.ಕಲಬುರ್ಗಿ ಮತ್ತು ಸಂಗಪ್ಪಯ್ಯಸ್ವಾಮಿ ಸಂಪಾದಿಸಿದ ಗುಂಡ ಬಸವೇಶ್ವರ ಚರಿತ್ರೆಯಲ್ಲಿ "ಭಾಳಲೋಚನ ಭಕ್ತನೊಬ್ಬ, ಹಳೆಯ ಸಗರದ ಹೊರಗೆ ಮಠಕಟ್ಟಿ ತಾ, ಇಳೆಯೊಳ ಅಮರಕಲ್ಯಾಣನೆನಿಸಿ" ಹಳೆಯ ಸಗರವೆಂದರೆ ಇಂದು ತಾಲೂಕು ಸ್ಥಳವಾದ ಶಹಾಪೂರ ಗ್ರಾಮವಾಗಿದೆ.

ಇಲ್ಲಿ ಬರುವ ದಿಗ್ಗಿಯ ಹೊರಗೆ ಮಠಕಟ್ಟಿ ಅದನ್ನು ಅಮರಕಲ್ಯಾಣ ಎಂದು ಹೆಸರಿಟ್ಟು ಅಮರಗೊಳಿಸಿದನೆಂದು ಉಲ್ಲೇಖವಿದೆ. ಹೀಗಾಗಿ ಕನ್ನಡ ನಾಡಿನಲ್ಲಿ ಐದು ಕಲ್ಯಾಣಗಳನ್ನು ಗುರುತಿಸುತ್ತಾರೆ. ೧೨ನೇ ಶತಮಾನದ ಬಸವಕಲ್ಯಾಣವನ್ನು 'ಸಮಯಕಲ್ಯಾಣ' ಪ್ರೌಢದೇವರಾಯ ಕಾಲದ 'ವಿಜಯಕಲ್ಯಾಣ' ದಿಗ್ಗಿ 'ಅಮರಕಲ್ಯಾಣ', ನಾಗಾವಿ 'ಧರ್ಮಕಲ್ಯಾಣ' ಕೊಡೇಕಲ್ಲು 'ಕಡೆಯಕಲ್ಯಾಣ' ಎಂದು ಗುರುತಿಸಿದ್ದಾರೆ.

ಹೀಗಿರುವುದರಿಂದ ದಿಗ್ಗಿಯು ಅಮರಕಲ್ಯಾಣವಾಗಿದೆ. ಈ ಅಮರಕಲ್ಯಾಣದ ನಿರ್ಮಾತೃ ಸಂಗಮನಾಥನಾಗಿದ್ದಾನೆ ಎಂಬುದು ಕೃತಿಗಳಲ್ಲಿ ಉಲ್ಲೇಖವಾಗಿರುವುದರಿಂದ ಸಂಗಮನಾಥನನ್ನು ಕುರಿತು ಅಧ್ಯಯನ ಮಾಡುವುದು ತುಂಬಾ ಅಗತ್ಯವಾಗಿದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಅಧ್ಯಯನವು ಒಂಭತ್ತು ಅಧ್ಯಾಯಗಳನ್ನೊಳಗೊಂಡಿದೆ. ದಿಗ್ಗಿ ಸ್ಥಳನಾಮ ಅಧ್ಯಯನ, ದಿಗ್ಗಿ ಸಂಗಮನಾಥನ ಕುರಿತ ಉಲ್ಲೇಖಿತ ಕೃತಿಗಳು ಹಾಗೂ ಆತನ ಚಾರಿತ್ರಿಕ ಅಧ್ಯಯನ, ಕಲ್ಯಾಣ ಪರಂಪರೆ ಮತ್ತು ದಿಗ್ಗಿ ಸಂಗಮನಾಥ, ಅಮರಕಲ್ಯಾಣವಾಗಿ ದಿಗ್ಗಿ ಮೆರೆದ ಬಗೆ, ಮತ್ತು ದಿಗ್ಗಿ ಸಂಗಮನಾಥನನ್ನು ಕುರಿತು ಇಂದು ಪ್ರಚಲಿತವಿರುವ ಸಾಂಸ್ಕೃತಿಕ ಆಚರಣೆಗಳು, ಗವಿ ಸಂಸ್ಕೃತಿಯ ವಾರಸುದಾರನಾಗಿ ದಿಗ್ಗಿ ಸಂಗಮನಾಥ. ಹೀಗೆ ಹಲವು ಆಯಾಮಗಳಲ್ಲಿ ಪ್ರಸ್ತುತ ಅಧ್ಯಾಯವನ್ನು ಕೈಗೊಳ್ಳಲಾಗಿದೆ.

ಈ ಅಧ್ಯಯನ ಕೊಡೇಕಲ್ಲ ಪರಂಪರೆಯ ಕಾಲಜ್ಞಾನಸಾಹಿತ್ಯ, ಸ್ವರವಚನಸಾಹಿತ್ಯ, ನಂದಿಯಾಗಮಲೀಲೆ, ಗುಂಡುಬಸವನ ಚರಿತ್ರೆ ಮುಂತಾದ ಕಾವ್ಯ ಕೃತಿಗಳಲ್ಲದೆ, ಸಗರನಾಡಿನ ಐತಿಹಾಸಿಕ ಸ್ಥಳಗಳಾದ ಹೆಬ್ಬಾಳ, ಕೊಡೇಕಲ್ಲ, ಜಲದುರ್ಗ, ದಿಗ್ಗಿ ಈ ಸ್ಥಳಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಿ ಪ್ರಸ್ತುತ ಅಧ್ಯಯನದ ಸ್ವರೂಪವನ್ನು ವಿಸ್ತರಿಸಲಾಗಿದೆ. ಒಟ್ಟಿನಲ್ಲಿ ಅತ್ತ ಬಸವಕಲ್ಯಾಣದ ಹನ್ನೆರಡನೆಯ ಶತಮಾನದ ಶರಣರ ಹಾಗೂ ಇತ್ತ ಕೊಡೇಕಲ್ಲ ಕಲ್ಯಾಣದ ಶರಣ ಪರಂಪರೆಯ ಕೊಂಡಿಯಂತೆ ಜೀವಿಸಿದ್ದ ದಿಗ್ಗಿ ಸಂಗಮನಾಥನ ಚಾರಿತ್ರಿಕ ಸಂಗತಿಗಳನ್ನು ನಿರೂಪಿಸುವ ಅಧ್ಯಯನವೇ 'ದಿಗ್ಗಿ ಸಂಗಮನಾಥ: ಒಂದು ಅಧ್ಯಯನ' ಹೆಸರಿನ ಕಿರು ಪ್ರಬಂಧವಾಗಿದೆ.

**ಕೊನೆಯ ಟಿಪ್ಪಣಿಗಳು**

೧. ಕೊಡೇಕಲ್ಲ ಬಸವಣ್ಣ: ಒಂದು ಅಧ್ಯಯನ- ಡಾ. ಬಸವಲಿಂಗ ಸೊಪ್ಪಿಮಠ, ಪುಟ ೫

೨. ಕೊಡೇಕಲ್ಲ ವಚನವಾಕ್ಯ ಸಂ.- ಡಾ. ಬಸವಲಿಂಗ ಸೊಪ್ಪಿಮಠ, ಪುಟ ೧೭

## ಅಧ್ಯಾಯ ೨

# ದಿಗ್ಗಿ: ಸ್ಥಳನಾಮ ಅಧ್ಯಯನ

ಗುಲ್ಬರ್ಗ ಜಿಲ್ಲೆಯ ಸುರಪುರ ತಾಲೂಕಿನ ಕೃಷ್ಣಾತೀರಕ್ಕೆ ಹೊಂದಿರುವ ಒಂದು ಗ್ರಾಮವೇ ದಿಗ್ಗಿ. ಸಗರವಾಡಿನ ನೆಲ-ಜಲದ ಪಾತ್ರ ತುಂಬಾ ವೈಶಿಷ್ಟ್ಯಪೂರ್ಣವಾದುದು. ಈ ಪ್ರದೇಶ ಹಿಂದು-ಮುಸ್ಲಿಂ ಸಂಘರ್ಷದ ರುದ್ರಭೂಮಿಯಾಗಿದ್ದು, ವಿಜಯನಗರದ ಅರಸರ ಮತ್ತು ಬಹುಮನಿ ಸುಲ್ತಾನರ ಮಧ್ಯದಲ್ಲಿ ನಡೆದ ಯುದ್ಧದಲ್ಲಿ ಬಲಿಯಾದ ಪ್ರದೇಶ ಈ ಸಗರನಾಡು. ಇಂತಹ ಸಂದರ್ಭದಲ್ಲಿ ದಿಗ್ಗಿಯ ಆರೂಢ ಸಂಗಮನಾಥನ ಆಗಮನವಾಗುತ್ತದೆ. ಆ ಯುದ್ಧದಲ್ಲಿ ತೊಡಗಿದ ಜನರಲ್ಲಿರುವ ವೈಷಮ್ಯ ಹೋಗಲಾಡಿಸಿ ಕಂಗಾಲಾದ ಅಥವಾ ನೊಂದ ಜನತೆಯನ್ನು ಸಂತೈಸಿ ಸಗರನಾಡಿನ ಜನತೆಯಲ್ಲಿ ನಾವೆಲ್ಲರೂ ಒಂದು ಎಂಬ ಮನೋಭಾವ ಉಂಟಾಗುವಂತೆ ಸಗರನಾಡನ್ನು ಮತ್ತೆ ಕಲ್ಯಾಣ ಸಂಸ್ಕೃತಿಯ ನೆಲೆಬೀಡಾಗಿ ನಿರ್ಮಿಸಿದನು.

ಈ ಪ್ರದೇಶದಲ್ಲಿ ತುಂಬಿ ಹರಿಯುವ ನದಿಗಳು, ಬೆಟ್ಟದ ಸಾಲುಗಳು, ಹಚ್ಚ ಹಸಿರಿನಿಂದ ಕಂಗೊಳಿಸುವ ಭೂಮಿ, ಮಲೆನಾಡಿನ ಸೊಬಗನ್ನು ಉಂಟುಮಾಡುವ ತಾಣ ಇದಾಗಿದೆ. ಮಾನವ ತನ್ನ ಅಲೆಮಾರಿ ಜೀವನವನ್ನು ತೊರೆದು ಪ್ರಕೃತಿಯನ್ನು ತನ್ನ ಜೀವನಕ್ಕೆ ಅಳವಡಿಸಿಕೊಳ್ಳುವುದು ಸೂಕ್ತ ಎಂಬುದನ್ನು ಯಾವಾಗ ಅರಿತನೋ ಆಗ ಊರು, ಗ್ರಾಮಗಳ ಉದಯವಾಯಿತು. ತಾನು ವಾಸವಾದ ಸ್ಥಳಕ್ಕೆ ಒಂದು ಹೆಸರನ್ನು ಇಟ್ಟುಕೊಂಡು ಜೀವನವನ್ನು ಸಾಗಿಸಿದನು. ಕ್ರಮೇಣವಾಗಿ ಅಲ್ಲಿ ಜನವಸತಿ ಆರಂಭವಾಗಿ ಹಲವು ಜನಾಂಗಗಳ ಸ್ಮರಣೆ ಶಾಶ್ವತವಾಗಿ ಬೆಸೆಯುವ ಒಂದು ಕೊಂಡಿಯಾಗಿ ಪರಿಣಮಿಸಿತು. ಅದೇ ಸ್ಥಳನಾಮ.

ಮಾನವ ಸಮುದಾಯಗಳೂ ಪ್ರಾಕೃತಿಕ ಪರಿಸರದೊಂದಿಗೆ ತಮ್ಮ ನೆಲೆಗಳಿಗೆ ಹೆಸರನ್ನು ಗುರುತಿಸಿಕೊಂಡರು. ಬೆಟ್ಟ, ಮರ, ಗಿಡ, ಕಲ್ಲು, ಗುಡ್ಡ, ಮಣ್ಣು, ಜಲ ಇವುಗಳ ಗಾಢ ಸಂಬಂಧವು ಸ್ಥಳನಾಮಗಳಿಗೆ ಪ್ರೇರಣೆ ನೀಡಿರಬೇಕು. ಹೆಚ್ಚಾಗಿ ಜನಸಮೂಹ ವಾಸವಾಗಿದ್ದುದು ಬೆಟ್ಟಗಳ ಅಂಚಿನಲ್ಲಿ,

ದಿನ್ನೆಯ ಪ್ರದೇಶಗಳಲ್ಲಿ, ನೀರಿನ ತಾಣಗಳಲ್ಲಿ ಅಥವಾ ನದಿಯ ದಂಡೆಯ ಮೇಲೆ ಎಂಬುದನ್ನು ಗಮನಿಸಿದರೆ, ನಿಸರ್ಗದ ಗಾಢವಾದ ಸಂಬಂಧದೊಂದಿಗೆ ಮಾನವನ ಜೀವನ ಪ್ರಕೃತಿನಿಷ್ಠ ಗ್ರಾಮ ನಾಮಗಳ ಉದಯಕ್ಕೆ ನಾಂದಿಯಾದರು.

'ಸ್ಥಳನಾಮ'ವೆಂದರೆ ಊರ ಹೆಸರುಗಳು. ಗ್ರೀಕ್‌ಭಾಷೆಯಲ್ಲಿ 'ಟೋಪೋಸ್'. ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಧಾನವೇ ಟೋಪೋಸ್. ಟೋಪೋಸ್ ಭೂ ವಿವರವನ್ನು ಸೂಚಿಸುವ ಅರ್ಥ ಹೊಂದಿದ್ದರೂ ಇಲ್ಲಿ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ವೈಲಕ್ಷಣ್ಯಗಳೆರಡು ಒಳಗೊಂಡಿದೆ. ಭಾರತದಲ್ಲಿ ಇಂಥ ಭೌಗೋಳಿಕ ನಾಮ ಅಥವಾ ದೇಶನಾಮಗಳಿಗೆ ಪ್ರಾದೇಶಿಕ ಭಾಷೆಯಲ್ಲಿ ಗ್ರಾಮನಾಮ, ಊರ ಹೆಸರು ಎನ್ನುವರು. ಆದರೆ ಈ ಹೊತ್ತು ಸ್ಥಳನಾಮ ಬೇರೆ, ಗ್ರಾಮನಾಮ ಬೇರೆ. ಹೀಗಾಗಿ ಸ್ಥಳನಾಮ, ಗ್ರಾಮನಾಮ, ವ್ಯಕ್ತಿನಾಮ, ಕುಟುಂಬ ನಾಮ ಹೀಗೆ ಈ ಎಲ್ಲ ನಾಮಗಳ ಅಧ್ಯಯನವೇ 'ನಾಮವಿಜ್ಞಾನಶಾಸ್ತ್ರ' ಎಂಬುದಾಗಿ ವಿದ್ವಾಂಸರು ಇತ್ತೀಚೆಗೆ ಅಭಿಪ್ರಾಯ ಪಡುತ್ತಾರೆ. ಈ ಅಭಿಪ್ರಾಯ ಸರಿಯೆನಿಸುತ್ತದೆ. 'ಕರ್ನಾಟಕ ಸರ್ಕಾರದವರು ಪ್ರಕಟಿಸುವ ಗ್ರಾಮನಾಮ ಸೂಚಿ' ಕೇವಲ ಗ್ರಾಮನಾಮಗಳನ್ನು ಪಟ್ಟಿ ಮಾಡಲಾಗಿದೆ. ಆದರೆ ವಸತಿ, ನಿರ್ವಸತಿ ಎಂಬ ಎರಡು ಪ್ರಬೇಧಗಳ ನಾಮವಿಜ್ಞಾನದಲ್ಲಿ 'ವಸತಿ'ಯನ್ನು ಗ್ರಾಮನಾಮಗಳ ಅಡಿಯಲ್ಲಿ 'ನಿರ್ವಸತಿ'ಯನ್ನು ಸ್ಥಳನಾಮ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕಾಗಿದೆ.

ಪ್ರಸ್ತುತ 'ದಿಗ್ಗಿ' ಗುಲ್ಬರ್ಗಾ ಜಿಲ್ಲೆ ಶಹಾಪೂರ ಸಮೀಪದ ಒಂದು ಗ್ರಾಮ. ಯಾವುದೇ ಗ್ರಾಮನಾಮಗಳ ಅಧ್ಯಯನಕ್ಕೆ ಭೌಗೋಳಿಕ ಪರಿಸರ ಕಾರಣವಾಗುತ್ತದೆ. ಹೀಗಾಗಿ ದಿಗ್ಗಿ ಭೌಗೋಳಿಕ ಲಕ್ಷಣವನ್ನು ಸೂಚಿಸುವ ಪದ. ಇದಕ್ಕೆ ಬೆಟ್ಟ, ದಿನ್ನೆ, ಎತ್ತರ ಪ್ರದೇಶ, ಗುಡ್ಡ ಎಂಬರ್ಥಗಳಿವೆ. ಸಾಮಾನ್ಯವಾಗಿ 'ದಿಗ್ಗಿ' ಎಂಬ ಹೆಸರು ಅಂಕುಡೊಂಕಾದ ಪ್ರದೇಶವಿರುವುದರಿಂದ ಈ ಹೆಸರು ಬಂದಿರಬಹುದು. 'ದಿಣ್ಣೆ'-'ದಿಗ್ಗಿ' ಯಾಗಿ ಬದಲಾವಣೆ ಹೊಂದಿ ಣ್>ಗ ಕಾರ ಆಗಮವಾಗಿ ದಿಣ್ಣೆ > ದಿಗ್ಗಿಯಾಗಿ ಪರಿವರ್ತನೆಯಾಗಿದೆ. ದಿಗ್ಗಿಯೆಂದರೆ ತಗ್ಗು-ದಿನ್ನೆಗಳಿಂದ ಕೂಡಿದ ಪ್ರದೇಶ. ಬೆಟ್ಟ, ಗುಡ್ಡ, ದಿನ್ನೆ ಮುಂತಾದ ಎತ್ತರವಾದ ಪ್ರದೇಶಗಳ ಹತ್ತಿರವಿರುವ ಊರಾಗಿದೆ. ತಗ್ಗು-ದಿಣ್ಣೆ ಎಂಬ ಜೋಡುಪದಗಳಿಂದ ಸಂವಾದಿಯಾಗಿ ಬಂದಿರುವ ಹೆಸರಾಗಿದೆ. ಇದು ಫಲವತ್ತಾಗಿರುವ ಪ್ರದೇಶ ವಾಗಿರುವುದರಿಂದಲೂ ಈ ನಾಮ ಸೂಕ್ತವೆನಿಸುತ್ತದೆ.

ಜನವದಂತಿಯ ಪ್ರಕಾರ ಐತಿಹ್ಯವೊಂದು ಹೀಗಿದೆ: ಸಗರನಾಡಿನ ದಿಗ್ಗಿ ಪ್ರದೇಶದಲ್ಲಿ ರಾಕ್ಷಸರ ಉಪಟಳತನದಿಂದ ಜನ ಹಿಂಸೆಗೆ ಒಳಗಾದರು. ಸಂಗಮನಾಥನಲ್ಲಿ ಆಗಮಿಸಿ ಕೇಳಿಕೊಂಡಾಗ ಸಂಗಮನಾಥ ಅಸುರರನ್ನು ಸಂಹರಿಸಿದನು. ಶವಗಳು ದಿಗ್ಗಿ ದಿಗ್ಗಿಯಾಗಿ ಬಿದ್ದವು. ಅದಕ್ಕಾಗಿ ದಿಗ್ಗಿ ಎಂಬ ಹೆಸರು ಬಂತು.

ದಿಗ್ಗಿಯು ಸುರಪುರ ತಾಲೂಕು ಶಹಪುರ ಹತ್ತಿರದ ಒಂದು ಚಿಕ್ಕ ಗ್ರಾಮ. ಐದುನೂರು ಮನೆಯನ್ನು ಮೂರು ಸಾವಿರ ಜನಸಂಖ್ಯೆಯನ್ನು ಹೊಂದಿದೆ. ಇವರ ಭಾಷೆ ಕನ್ನಡ. ವೃತ್ತಿ ಕೃಷಿಯಾಗಿದೆ. ಚಿಕ್ಕಕೆರೆ (ಚಿಕ್ಕೆರಿ) ಸಂಗಯ್ಯನ ಕೆರೆ ಎಂಬ ಎರಡು ಕೆರೆಗಳಿವೆ. ಈ ಗ್ರಾಮದ ಸುತ್ತಮುತ್ತಲಿನ ಪ್ರದೇಶದ ಹಲವು ನೆಲೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಪ್ರಾಚ್ಯ ಅವಶೇಷಗಳು ದೊರೆತಿವೆ. ಶ್ರೇಷ್ಠವಾದ ಭೀಮಾನದಿಯು ಹರಿದಿದೆ. ಇಲ್ಲಿನ ಭೂಮಿ ಕಪ್ಪು ಮಿಶ್ರಿತ ಕೆಂಪು ಮಣ್ಣು. ಈ ಗ್ರಾಮವು ಗುಡ್ಡಗಳಿಂದ ಆವೃತವಾಗಿ ಗುಡ್ಡಗಳೆಲ್ಲಾ ಶಿಲಾಮಯವಾಗಿವೆ. ಇವು ನಿಸರ್ಗವು ನೀಡಿದ ನೈಸರ್ಗಿಕ ಸಂಪನ್ಮೂಲಗಳಾಗಿವೆ. ಈ ಪರಿಸರದಲ್ಲಿ ಕಂಡುಬರುವ ಗುಡ್ಡಗಳು ಕೋಟೆಗಳ ನಿರ್ಮಾಣಕ್ಕೆ ಸಹಕಾರಿಯಾಗಿವೆ.

ಸಗರನಾಡೆಂದೇ ಹೆಸರಾದ ಇದು ಪುರಾಣ ನೆಲೆಯಲ್ಲಿ ಸಗರ ಚಕ್ರವರ್ತಿಯು ಆಳಿದ್ದನ್ನು ಕಲ್ಪಿಸಿಕೊಂಡ ಕಾರಣವಾಗಿ ಈ ಹೆಸರು ಬಂದಿದೆ. ಈ ಪ್ರದೇಶಗಳಲ್ಲಿ ನಡೆದ ಸಂಘರ್ಷವು ಚರಿತ್ರೆಯ ತಿರುವುಗಳಾಗಿ ಪರಿಣಮಿಸಿದವು. ಮಹಮ್ಮದ್ ಬಿನ್ ತುಘಲಕ್ ದಾಯಾದಿ ಘಿಯಾಸುದ್ದೀನನ ಅಕ್ಕನ ಮಗ ಬಹು-ಉದ್-ದೀನ್ ಗುರುಷಾಸ್ಪನು ಸಗರನಾಡಿನ ರಾಜ್ಯಪಾಲನಾಗಿದ್ದಾಗ ಮಹಮ್ಮದ್ ಬಿನ್ ತುಘಲಕ್ ವಿರುದ್ಧ ಹೋರಾಡಿದ್ದು ಸುರಪುರ ಇತಿಹಾಸದಲ್ಲಿಯೇ ಮಹತ್ವದ ಸಂಗತಿಯಾಗಿದೆ. ಬಹು-ಉದ್-ದೀನ್‌ನು ಧೈರ್ಯದಿಂದ ಚಾಣಾಕ್ಷತನದಿಂದ ಸುತ್ತಲಿನ ರಾಜ್ಯಗಳನ್ನು ಗೆದ್ದುಕೊಂಡನು. ತುಘಲಕ್ ಈತನನ್ನು ಸದೆಬಡಿಯಲು ಗುಜರಾತಿನ ರಾಜ್ಯಪಾಲ ಮಲ್ಲಿಕ್‌ಜಾದಾ ಮಹಮ್ಮದನನ್ನು ನೇಮಿಸಿದ.

ಬಹುಉದ್‌ದೀನ್‌ನನ್ನು ಮಲ್ಲಿಕ್‌ಜಾದಾ ಸೇನಾನಾಯಕನು ಎದುರಿಸುತ್ತಾನೆ. ಆಗ ಬಹು-ಉದ್-ದೀನ್‌ನ ಸೇನಾಧಿಕಾರಿ ವೈರಿಪಡೆಯನ್ನು ಸೇರುತ್ತಾನೆ. ಉಪಾಯವಿಲ್ಲದೆ ಬಹು-ಉದ್-ದೀನ್‌ನು ಕಂಪ್ಲಿಯ ಕಂಪಿಲರಾಜನ ಪಡೆಯನ್ನು ಸೇರುತ್ತಾನೆ. ತುಘಲಕ್ ಮತ್ತು ಕಂಪಿಲರಾಜನ ಸಂಘರ್ಷದಲ್ಲಿ ಬಹು-ಉದ್-ದೀನ್ ಹೀನಾಯವಾಗಿ ತುಘಲಕ್‌ನಿಂದ ಸಾವನ್ನಪ್ಪುತ್ತಾನೆ. ನಂತರ ಸಗರನಾಡು ಸಂಪೂರ್ಣ ತುಘಲಕ್‌ನ ಹತೋಟಿಗೆ ಒಳಪಡುತ್ತದೆ. ಇವರ ಪತನಾನಂತರ ಕ್ರಿ.ಶ. ೧೩೩೦ರಲ್ಲಿ ವಿಜಯನಗರ ಸಾಮ್ರಾಜ್ಯ, ಕ್ರಿ.ಶ. ೧೩೪೭ರಲ್ಲಿ ಬಹುಮನಿ ಸಾಮ್ರಾಜ್ಯಗಳು ಪ್ರಬಲಶಕ್ತಿಗಳಾಗಿ ಸಂಘರ್ಷಕ್ಕಿಳಿದವು.

"ವಿಜಯನಗರದ ಅರಸರು ಬಹುಮನಿ ಸುಲ್ತಾನರು ಪರಸ್ಪರ ಪೈಪೋಟಿಯಿಂದ ತಮ್ಮ ತಮ್ಮ ಸಾಮ್ರಾಜ್ಯ ವಿಸ್ತರಣೆಗಾಗಿ ನಡೆಸಿದ ಯುದ್ಧಗಳು, ದಾಳಿಗಳು, ಸಗರನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಭಯವನ್ನು ಬಿತ್ತಿದವು."[೧] ಈ ಅವಧಿಯಲ್ಲಿ ದಿಗ್ಗಿ ಸಂಗಮನಾಥ ಉದಯಿಸಿದನು. ಆಗ ಧರ್ಮವು ಸಂಘರ್ಷ ರೂಪವನ್ನು ತಳೆಯಿತು. ಆಗ ಸಂಗಮನಾಥನು ಧಾರ್ಮಿಕ ಸಹಿಷ್ಣುವಾಗಿ ಮೆರೆದ ಸಂಗತಿಯನ್ನು ಕೊಡೇಕಲ್ ಬಸವಣ್ಣನವರ ಕಾಲಜ್ಞಾನ ಸಾಹಿತ್ಯ ಮತ್ತು ಸ್ವರವಚನಗಳಿಂದ ಅರಿಯಬಹುದಾಗಿದೆ.

ಸುರಪುರ ಮತ್ತು ಶಹಾಪೂರ ಬೆಟ್ಟಗಳಲ್ಲಿ ದಿಗ್ಗಿ ಸಂಗಮನಾಥನ ಗವಿಯನ್ನೊಳಗೊಂಡು ೧೦೧ ದೇವಸ್ಥಾನಗಳಿಂದ ಕೂಡಿದ ಕಾರಣದಿಂದ ಇದಕ್ಕೆ ಮೊದಲನೆಯ ಶ್ರೀಶೈಲ ಎನ್ನುವರು. ದಿಗ್ಗಿಯ ಗುಡ್ಡದಲ್ಲಿ

ಸಂಗಮನಾಥ, ಪ್ರಭುದೇವರ ಗವಿಗಳಿವೆ. ಏಳು ಅಗಸಿಗಳು, ಏಳು ಹನುಮಂತದೇವರ ಗುಡಿಗಳು ಹಾಗೆಯೇ ಅಮರಕಲ್ಯಾಣ ಎಂಬ ಗವಿ ಇರುವುದು ಕಂಡುಬರುತ್ತದೆ. ಹೀಗಿರುವುದರಿಂದಲೇ ದಿಗ್ಗಿಯು ಅಮರಕಲ್ಯಾಣವಾಗಿದೆ. ಇಲ್ಲಿ ಎಲ್ಲಾ ದೇವಸ್ಥಾನಗಳು ಬೆಟ್ಟದಲ್ಲಿರುವುದೊಂದು ವಿಶೇಷ.

ದಿಗ್ಗಿಯ ಸಂಗಮನಾಥನ ದೇವಾಲಯ ಮುಸ್ಲಿಂ ವಿನ್ಯಾಸದಲ್ಲಿದೆ. ಗೋಪುರ ಹಿಂದು ಶೈಲಿಯಲ್ಲಿದೆ. ಗುಡ್ಡದಲ್ಲಿ ಎಂಭತ್ತು ಮೆಟ್ಟಿಲನ್ನೇರಿ ಒಂದು ಬೃಹತ್ತಾದ ಬಂಡೆಗಲ್ಲಿನ ಮಧ್ಯದ ಗವಿಯ ಆ ಏಕಾಂತವಾದ ತಾಣದಲ್ಲಿ ಸಂಗಮನಾಥ ತಪಸ್ಸನ್ನು ಕೈಗೊಂಡಿರುವ ಆ ಗವಿಯನ್ನು ಈಗಲೂ ನೋಡಬಹುದು. ಹಿಂದೂ-ಮುಸ್ಲಿಂ ಏಕತೆಯ ಸ್ವರೂಪವನ್ನೊಳಗೊಂಡಿದೆ.

ದಿಗ್ಗಿಯಲ್ಲಿ ಸಂಗಮನಾಥನ ಗವಿಯ ಮೇಲೆ, ಪ್ರಭುದೇವನ ಗವಿಯಿದೆ. ಅದರ ಮೇಲೆ ಸಂಗಮನಾಥನ ಶಿಷ್ಯನಾದ ಚಂದಾಸಾಬನ ಗವಿಯಿದೆ. ಜನತೆಯ ನಂಬಿಕೆಯ ಪ್ರಕಾರ ಯುದ್ಧದ ಸಂಘರ್ಷದಲ್ಲಿ ಚಂದಾಸಾಬನನ್ನು ಬೆನ್ನಟ್ಟಿಕೊಂಡು ಬಂದರು. ಆಗ ಚಂದಾಸಾಬ ಸಂಗಮನಾಥನಲ್ಲಿ ಧಾವಿಸಿ ಬಂದು ವಿಷಯವನ್ನು ವ್ಯಕ್ತಪಡಿಸಿದಾಗ ಮೇಲೆ ಹೋಗಿ ಕೂಡು ಎಂದು ಹೇಳಿ ತನ್ನ ಶಿಷ್ಯನನ್ನು ರಕ್ಷಿಸಿದನು. ಸಂಗಮನಾಥನ ದೇವಸ್ಥಾನದಲ್ಲಿ ಪ್ರತಿವರ್ಷವು ವಿಭಿನ್ನ ಜಾತಿಯ ವಿವಾಹಗಳು ನಡೆಯುತ್ತವೆ.

ದಿಗ್ಗಿಯಲ್ಲಿ ೧೮ನೇ ಶತಮಾನದ ಒಂದು ಶಾಸನವಿದೆ. ಅದರಲ್ಲಿ "ಅಂಬಲಿಕೆಯ ತಿಂಮಯನ ಮಗ ಧಂಮರಸ"[೨] ಎಂದು ಅಂಬಲಿಕೆಯ ತಿಮ್ಮನ ಮಗ ಧಮ್ಮರಸನನ್ನು ಹೆಸರಿಸುತ್ತದೆ. ಈ ಶಾಸನ ದಿಗ್ಗಿ ಗ್ರಾಮದಲ್ಲಿರುವುದರಿಂದ ನನ್ನ ಅಧ್ಯಯನದ ಸಂಗಮನಾಥನಿಗೂ ಹಾಗೂ ಈ ಶಾಸನೋಕ್ತ ಧಮ್ಮಾರನಿಗೂ ಯಾವುದೇ ದಾನ ದತ್ತಿಯ ಸಂಬಂಧವನ್ನು ಸಂಯೋಜಿಸಲು ಸಾಧ್ಯವಾಗುವುದಿಲ್ಲ. ಅದೇನೇ ಇರಲಿ ದಿಗ್ಗಿ ಎಂಬ ಹೆಸರು ಭೌಗೋಳಿಕವಾಚಿಯಾದ ದಿನ್ನಿ, ಬೆಟ್ಟ, ಗುಡ್ಡ ಎಂಬರ್ಥದಲ್ಲಿ ಬಂದಿರಬಹುದೆಂಬುದನ್ನು ಸದ್ಯಕ್ಕೆ ಒಪ್ಪಿಕೊಳ್ಳಬಹುದಾಗಿದೆ.

## ಅಧ್ಯಾಯ ೩

# ದಿಗ್ಗಿ ಸಂಗಮನಾಥ: ಉಲ್ಲೇಖಿತ ಕೃತಿಗಳು

ಕನ್ನಡ ಸಾಹಿತ್ಯದಲ್ಲಿ ಕಾವ್ಯೋಕ್ತ ಕವಿಚರಿತೆಗೆ ವಿಶಿಷ್ಟವಾದ ಸ್ಥಾನವಿದೆ. ಒಬ್ಬ ಕವಿಯ ಪೂರ್ಣ ಪ್ರಮಾಣದ ಚರಿತ್ರೆಯನ್ನು ನಿರೂಪಿಸುವ ಅಖಂಡ ಸ್ವರೂಪದ ಕೃತಿಗಳು ರಚನೆಯಾದರೆ ಇನ್ನು ಕೆಲವು ಆನುಷಂಗಿಕ ಉಲ್ಲೇಖದಿಂದ ರಚನೆಯಾಗಿರುತ್ತವೆ. ಇವುಗಳಲ್ಲಿ ಮೊದಲನೆಯ ವರ್ಗಕ್ಕೆ ಸೇರುವ ಬಸವರಾಜ ರಗಳೆ, ಅಕ್ಕಮಹಾದೇವಿ ರಗಳೆ, ಶಂಕರದಾಸಿಮಯ್ಯನ ಪುರಾಣ, ರಾಘವಾಂಕ ಚರಿತೆ ಮುಂತಾದ ಕೃತಿಗಳನ್ನು ಹೆಸರಿಸಬಹುದು. ಈ ಚರಿತ್ರೆಯಲ್ಲಿ ಪುರಾಣ ಹೆಚ್ಚು ಪ್ರಾಬಲ್ಯವನ್ನು ಪಡೆದಿರುತ್ತದೆ. ಇನ್ನು ಎರಡನೆಯ ವರ್ಗದಲ್ಲಿ ಯಾವುದೇ ಒಂದು ಕೃತಿಯ ಸನ್ನಿವೇಶಗಳಲ್ಲಿ ಪ್ರಾಸಂಗಿಕವಾಗಿ ಒಬ್ಬ ವ್ಯಕ್ತಿಯನ್ನು ಕುರಿತು ಚರ್ಚಿಸಲಾಗುತ್ತದೆ. ಇಂತಹ ಸಾಂದರ್ಭಿಕ ಸನ್ನಿವೇಶದ ಉಲ್ಲೇಖಗಳಿಗೆ ಹೆಚ್ಚು ಚಾರಿತ್ರಿಕ ಮಹತ್ವ ಇರುತ್ತದೆ. ಪ್ರಾಯಶಃ ಒಂದು ಅಖಂಡ ಕೃತಿಯಲ್ಲಿ ದೊರೆಯದೆ ಇರುವ ನಿಜ ಇತಿಹಾಸವನ್ನು ಇಂತಹ ಸನ್ನಿವೇಶಗಳು ನಿರೂಪಿಸಿಕೊಡುತ್ತದೆ. ಉದಾಹರಣೆಗೆ ಗುಂಡ ಬಸವೇಶ್ವರ ಚರಿತ್ರೆ, ನಂದಿಯಾಗಮಲೀಲೆ, ಸುಪ್ಪಿವಚನ, ಶಿವತತ್ವ ಚಿಂತಾಮಣಿ ಮುಂತಾದ ಕೃತಿಗಳನ್ನು ಹೆಸರಿಸಬಹುದು. ಇಂತಹ ಕಾವ್ಯಗಳಲ್ಲಿ ಸ್ಥಳನಾಮ ಚರಿತ್ರೆ, ವ್ಯಕ್ತಿನಾಮ ಅಧ್ಯಯನಗಳಂತಹ ಆಕರಗಳು ಲಭ್ಯವಾಗುತ್ತವೆ. ಈ ಹಿನ್ನೆಲೆಯಲ್ಲಿ ದಿಗ್ಗಿ ಸಂಗಮನಾಥನ ಉಲ್ಲೇಖಿತ ಕೃತಿಗಳು ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನ ಯೋಗ್ಯವಾಗಿವೆ.

ದಿಗ್ಗಿ ಸಂಗಮನಾಥ ಒಬ್ಬ ದಾರ್ಶನಿಕ, ವಚನ ಪರಂಪರೆಯ ಆಶೋತ್ತರಗಳು ಅಮರಕಲ್ಯಾಣದ ಹೆಸರಿನಲ್ಲಿ ಉಳಿಯುವಂತೆ ಮಾಡಿದ ಒಬ್ಬ ಶರಣಯೋಗಿ. ಮುಂದಿನ ಕೊಡೇಕಲ್ಲ ಪರಂಪರೆಗೆ ಅಸ್ತಿಭಾರ ಹಾಕಿದ ಚಾರಿತ್ರಿಕ ವ್ಯಕ್ತಿ. ಈತನನ್ನು ಕುರಿತು ಕೊಡೇಕಲ್ಲ ಬಸವಣ್ಣನ ಸಾಹಿತ್ಯ, ಆತನ ಮಗನಾದ ರಾಚಪ್ಪಯ್ಯನ ಸಾಹಿತ್ಯ, ಇದೇ ಪರಂಪರೆಯಲ್ಲಿ ಬರುವ ವೀರಸಂಗಪ್ಪಯ್ಯನ ಕೃತಿಗಳು ವಿಶೇಷವಾಗಿ, ಕೊಡೇಕಲ್ಲ ಪರಂಪರೆಗಿಂತ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ನಾಗಾವಿ ಪರಿಸರದ 'ಧರ್ಮಕಲ್ಯಾಣ'ವನ್ನು ನಿರೂಪಿಸುವ ಗುಂಡ ಬಸವೇಶ್ವರ ಚರಿತ್ರೆ, ದಕ್ಷಿಣ ಕರ್ನಾಟಕದ ಮಂಟೇಸ್ವಾಮಿಯ ಡಂಗುರ ಪದಗಳು ದಿಗ್ಗಿ ಸಂಗಮನಾಥನನ್ನು ಕುರಿತು ಕೆಲವು ಸಂಗತಿಗಳನ್ನು ಬಿಚ್ಚಿಡುತ್ತವೆ.

೩.೧. ಕೊಡೇಕಲ್ಲ ಪರಂಪರೆಯ ಸಾಹಿತ್ಯ

"ಕೊಡೇಕಲ್ಲ ಸಾಹಿತ್ಯ ಪರಂಪರೆಯಲ್ಲಿ ಬಸವಣ್ಣನವರ 'ಕಾಲಜ್ಞಾನ ಸಾಹಿತ್ಯ', 'ಸ್ವರವಚನ ಸಾಹಿತ್ಯ'[೧] ಈತನ ಮಗ ರಾಚಪ್ಪಯ್ಯನ ಪ್ರಭುಚರಿತೆ, ಮಾಯಾಸಾಂಗತ್ಯ, ಗಿರಿಜಾಕಲ್ಯಾಣ, ಮಹಾದೇವಿಯಕ್ಕನ ಸಾಂಗತ್ಯ, ಸೌಂದರ ನಂಬಿಯಣ್ಣನ ಚರಿತ್ರೆ, ಕಾಯಸಾಂಗತ್ಯ, ಸ್ವರ್ಗಾರೋಹಣ, ಪಿಟ್ಟವ್ವೆ ಸಾಂಗತ್ಯ, ಸಂಧಿವಚನ, ಸುವ್ವಿವಚನ ಮತ್ತು ತತ್ವಪದಗಳನ್ನು ಬರೆದಿದ್ದಾನೆ. ಇದೇ ಪರಂಪರೆ ವೀರಸಂಗಪ್ಪಯ್ಯನೆಂಬುವವನು ನಂದಿಯಾಗಮಲೀಲೆ, ಸ್ವರವಚನಗಳು ಮತ್ತು ಕಾಲಜ್ಞಾನ ಕಟ್ಟಳೆಯೆಂಬ ಕೃತಿಗಳನ್ನು ರಚಿಸಿದ್ದಾನೆ.[೨] ಕೊಡೇಕಲ್ಲ ಬಸವಣ್ಣನ ಧರ್ಮಪತ್ನಿ ನೀಲಮ್ಮನ ಸ್ವರವಚನಗಳು ರಚನೆಯಾಗಿವೆ[೩] ಈ ಎಲ್ಲ ಸಾಹಿತ್ಯವನ್ನು ಅನುಲಕ್ಷಿಸಿ ದಿಗ್ಗಿ ಸಂಗಮನಾಥನ ಚರಿತ್ರೆಯನ್ನು ನಿರೂಪಿಸಬಹುದಾಗಿದೆ.

೩.೧.೧. ಕೊಡೇಕಲ್ಲ ಬಸವಣ್ಣನವರ ಸಾಹಿತ್ಯ

ಕೊಡೇಕಲ್ಲ ಬಸವಣ್ಣನವರ ಸಾಹಿತ್ಯವನ್ನು ನಮ್ಮ ಅಧ್ಯಯನದ ದೃಷ್ಟಿಯಿಂದ ಮೂರು ಭಾಗಗಳಲ್ಲಿ ವರ್ಗೀಕರಿಸಿಕೊಳ್ಳಬಹುದಾಗಿದೆ. ೧. ಕಾಲಜ್ಞಾನ ಸಾಹಿತ್ಯ ೨. ನೀತಿಜ್ಞಾನ ಸಾಹಿತ್ಯ ೩. ಸ್ವರವಚನ ಸಾಹಿತ್ಯ.

೧. ಕಾಲಜ್ಞಾನ ಸಾಹಿತ್ಯ : ಶಿವಶರಣರು ಶಿವಜ್ಞಾನಿಗಳಾಗಿದ್ದಂತೆ ಕಾಲಜ್ಞಾನಿಗಳು ಆಗಿದ್ದರು. ಪಾತಂಜಲಿ ದರ್ಶನದ "ಪರಿಣಾಮತ್ರಯ ಸಂಯಮಾದಕೀ ತಾನಾಗತಜ್ಞಾನಂ" ಎಂಬ ಹೇಳಿಕೆಯ ಪ್ರಕಾರ ಧರ್ಮ, ಲಕ್ಷಣ, ಅವಸ್ಥಾನಗಳೆಂಬ ಮೂರು ಪರಿಣಾಮಗಳಲ್ಲಿ ಸಂಯಮ ಮಾಡುವುದರಿಂದ ಕ್ರಮವಾಗಿ ಭೂತ, ವರ್ತಮಾನ, ಭವಿಷ್ಯತ್‌ಕಾಲದ ಜ್ಞಾನವಾಗುವುದು. ಹೀಗಾಗಿ ಇದೊಂದು ಸಿದ್ಧಿ. ಇದನ್ನೇ ಅಂತಃ ಸ್ಫುರಣದಿಂದ ತಿಳಿಯುವ ತ್ರಿಕಾಲ ಜ್ಞಾನವೆನ್ನುತ್ತೇವೆ. ಜೈನರಲ್ಲಿ ಇದನ್ನು 'ಅವಧಿಜ್ಞಾನ' ಎನ್ನುತ್ತಾರೆ. ಇಲ್ಲಿ ಅವಧಿ ಎಂದರೆ ಕಾಲವೆಂದರ್ಥ. ಅವಧಿ ಜ್ಞಾನವೆಂದರೆ ಕಾಲಜ್ಞಾನ. ವೀರಶೈವ ಕಾಲಜ್ಞಾನ ಸಾಹಿತ್ಯವು ಚಾರಿತ್ರಿಕ, ಸಾಂಸ್ಕೃತಿಕ ಹಾಗೂ ನೈತಿಕ ದೃಷ್ಟಿಯಿಂದ ಮಹತ್ವದ ಕೊಡುಗೆಯಾಗುತ್ತದೆ. ಹನ್ನೆರಡನೆಯ ಶತಮಾನದ ವೀರಶೈವ ಕ್ರಾಂತಿಯಿಂದ ಇದು ಪ್ರೇರಿತವಾಗಿ ಅನಂತರದ ಧಾರ್ಮಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳಲ್ಲಿ ಅಂದಂದಿನ ಯುಗಧರ್ಮವನ್ನು ರೂಪಿಸಿಕೊಂಡು ಜನತೆಯಲ್ಲಿ ಮಹಾಪುರುಷರ ವಾಕ್ಯ ವಿಚಾರವಾಗಿ ಶ್ರದ್ಧೆ ನಂಬಿಕೆಯನ್ನು ಹೆಚ್ಚಿಸಿರುವುದಲ್ಲದೆ ಅವರನ್ನು ಅಪಾಯದ ಸಂದರ್ಭಗಳಲ್ಲಿ ಎಚ್ಚರಿಸುವ ಕಾರ್ಯವನ್ನು ಮಾಡಿದೆ. ಪುರಾಣ ಕವಿಗಳು ಅನುಭಾವಿ ಕವಿಗಳಂತೆ ವಚನಕಾರರು ಈ ಸಾಹಿತ್ಯ ಸೃಷ್ಟಿಯಲ್ಲಿ ಪ್ರಮುಖರೆನಿಸಿದ್ದಾರೆ.[೪]

"ಕಾಲಜ್ಞಾನ ಸಾಹಿತ್ಯ ನಾಡಿನ ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ವಸ್ತುವನ್ನೊಳಗೊಂಡ ಭವಿಷ್ಯ ಸಾಹಿತ್ಯ. ಕಾಲಜ್ಞಾನ ವಚನಕಾರರನ್ನು ಕುರಿತು ಡಾ. ಎಲ್. ಬಸವರಾಜು

ಅವರ 'ಜನರ ಯೋಗಕ್ಷೇಮದ ಗಡಿ ರಕ್ಷಕರಾಗಿ; ಅಪಾಯ ಬರುವ ಸಂದರ್ಭಗಳಲ್ಲಿ ಅವರನ್ನು ಎಚ್ಚರಿಸಿದ್ದಾರೆ'' ಎನ್ನುತ್ತಾರೆ. ಜನರ ರಕ್ಷಣೆಯ ಉದ್ದೇಶವೇ ಕಾಲಜ್ಞಾನ ಸಾಹಿತ್ಯದ ಪ್ರಮುಖ ಆಶಯವಾಗಿದೆ.''[೫]

ಇಂತಹ ಕಾಲಜ್ಞಾನ ಸಾಹಿತ್ಯಕ್ಕೆ ಕೊಡೇಕಲ್ ಪರಂಪರೆ ಹೆಸರುವಾಸಿಯಾಗಿದೆ. ಕೊಡೇಕಲ್ಲ ಬಸವಣ್ಣನವರು ರಚಿಸಿದರೆನ್ನಲಾದ ಕಾಲಜ್ಞಾನ ಸಾಹಿತ್ಯ ೮೮ ಹಾಡುಗಳಲ್ಲಿ ಲಭ್ಯವಿದೆ. ಈ ಹಾಡುಗಳನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಡಾ ಬಸವಲಿಂಗ ಸೊಪ್ಪಿಮಠ ಅವರ ಸಂಪಾದಕತ್ವದಲ್ಲಿ 'ಕೊಡೇಕಲ್ಲ ವಚನವಾಕ್ಯ' ಎಂಬ ಹೆಸರಿನಿಂದ ಪ್ರಕಟಿಸಿದೆ. ಈ ಕಾಲಜ್ಞಾನ ಸಾಹಿತ್ಯ ಸಾಂಗತ್ಯ, ತ್ರಿಪದಿ, ಚೌಪದಿ, ದೇಶಿ ಛಂದೋ ಮಟ್ಟುಗಳಲ್ಲಿ ರಚನೆಯಾಗಿವೆ. 'ಪ್ರತಿಸೂರ‍್ಯ ಮೂಡಿತಿನ್ನು,' 'ಕಡೆಯ ಕಲ್ಯಾಣವೆಂದೆನ್ನಿ' ಎಂಬ ಕಾಲಜ್ಞಾನದಲ್ಲಿ ತನ್ನ ಆರಾಧ್ಯ ಗುರು ಸಂಗಮನಾಥನನ್ನು ಸ್ಮರಿಸಿಕೊಳ್ಳಲಾಗಿದೆ.

೨. ನೀತಿಜ್ಞಾನ ಸಾಹಿತ್ಯ: ಕೊಡೇಕಲ್ಲ ಬಸವಣ್ಣನವರ ನೀತಿಜ್ಞಾನ ಸಾಹಿತ್ಯದಲ್ಲಿ ಗುರುಭಕ್ತಿ ಅವಿಚ್ಛಿನ್ನವಾಗಿ ಪ್ರಕಟವಾಗಿದೆ. ಶಿಷ್ಯನ ಉದ್ಧಾರದ ಕಳಕಳಿ ಇಲ್ಲಿಯ ಆಶಯ. ತನು-ಮನ ಶುದ್ಧಗಳ ಮೂಲಕ ದೃಢಚಿತ್ತ ಸಂಕಲ್ಪಗಳಿಂದ ಆಧ್ಯಾತ್ಮ ಪಥದಲ್ಲಿ ಮುಂದುವರೆಯಬೇಕೆಂಬ ಅರಿವಿನ ಬೆಳಕನ್ನು ಗುರುವು ನೀಡುತ್ತಾನೆ. ಇದರ ಜೊತೆಗೆ ವೇಷ್ಠಿ ಹಾಗೂ ಸಮಷ್ಠಿ ಉದ್ಧಾರಕ್ಕೆ ನೀತಿ, ನೈತಿಕ ತಳಹದಿಯಾಗುತ್ತದೆ. ಈ ಆಶಯವನ್ನು ಕನ್ನಡ ಸಾಹಿತ್ಯದ ಎಲ್ಲ ದಾರ್ಶನಿಕ ಕವಿಗಳಲ್ಲಿ ಕಾಣಬಹುದಾಗಿದೆ. ಇದಕ್ಕೆ ಕೊಡೇಕಲ್ಲ ಸಾಹಿತ್ಯವು ಹೊರತಾಗಿಲ್ಲ. ವಿಶೇಷವೆಂದರೆ ಕಾಲಜ್ಞಾನ, ಖಂಡಜ್ಞಾನ, ಸಾಹಿತ್ಯದಂತೆ ನೀತಿಜ್ಞಾನ ಸಾಹಿತ್ಯವನ್ನು ನಿರ್ಮಿಸಿದ ಶ್ರೇಯಸ್ಸು ಈ ಪರಂಪರೆಗೆ ಸಲ್ಲುತ್ತದೆ.

"ದಿಗ್ಗಿ ಸಂಗಮನಾಥನ ಕುರಿತು ಗುರುಬೋಧೆ ಎಂಬ ಪದ್ಯದಲ್ಲಿ ಸಂಗಮನಾಥನ ವ್ಯಕ್ತಿತ್ವವನ್ನು ಕುರಿತು ವಿವರಿಸಲಾಗಿದೆ.''[೬] ಖಂಡಜ್ಞಾನ ಸಾಹಿತ್ಯದಲ್ಲಿ ಆತ್ಮ ಅನುಸಂಧಾನಕ್ಕೆ ಮೊದಲು ಶರೀರವನ್ನು ಬಲಪಡಿಸುವ್ರುದು ಅಗತ್ಯ ಎನ್ನುತ್ತದೆ ಕೊಡೇಕಲ್ಲ ಸಿದ್ಧಾಂತ. ನಾಥ ಪಂಥದಿಂದ ಪ್ರಭಾವಿತನಾದ ಕೊಡೇಕಲ್ಲ ಬಸವ ಆ ಪಂಥದ ಚರಮಲಕ್ಷ್ಯವಾದ ಕಾಯದ ಅಮರತ್ವವನ್ನು ವೀರಶೈವದ ಶಿವಯೋಗದೊಂದಿಗೆ ಸಮೀಕರಿಸಿ ಸ್ವೀಕರಿಸಿದ್ದನ್ನು ಅವನ ಜೀವನ ಚರಿತ್ರೆ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಹಿಂದೆ ಪ್ರಸ್ತಾಪಿಸಿದೆ. ಈ ತತ್ವ ಸಿದ್ಧಾಂತದ ವಿವರ ಚರ್ಚೆ ಮುಂದೆಬರಲಿರುವುದರಿಂದ ಕೊಡೇಕಲ್ಲ ಬಸವ ಕಾಯಮಹತ್ವವನ್ನು ತನ್ಮೂಲಕ ಆತ್ಮದ ಔನ್ನತ್ಯದ ರಹಸ್ಯವನ್ನು 'ಖಂಡಜ್ಞಾನ' ರಚನೆಗಳಲ್ಲಿ ಹೇಳಿದ್ದಾನೆ ಎಂದು ಸದ್ಯ ತಿಳಿದರೆ ಸಾಕು.''[೭]

ಇಂತಹ ೪೭ ಖಂಡಜ್ಞಾನ ಸಾಹಿತ್ಯವನ್ನು ಡಾ. ಬಸವಲಿಂಗ ಸೊಪ್ಪಿಮಠ ಕೊಡೇಕಲ್ಲ 'ವಚನ ವಾಕ್ಯ'ದಲ್ಲಿ ಸಂಪಾದಿಸಿ ಕೊಟ್ಟಿದ್ದಾರೆ. 'ಮರೆಮಾಡಿ ಬಂದಾನೆ ಲಿಂಗ, 'ಅರಿವರಾರಳವಲ್ಲ', 'ತೂಗುಮನದ ಘನ ಉಯ್ಯಾಲೆ' ಎಂಬಂತಹ ಹಾಡುಗಳಲ್ಲಿ ತನ್ನ ಪರಮಾರಾಧ್ಯ ದಿಗ್ಗಿ ಸಂಗಮನಾಥನನ್ನು ಸ್ಮರಿಸಲಾಗಿದೆ.

**೩. ಸ್ವರ ವಚನ ಸಾಹಿತ್ಯ :** “ಶಿವಶರಣರು ವಚನ ಸ್ವರವಚನಗಳೆಂಬ ಎರಡು ರೀತಿಯ ಸಾಹಿತ್ಯವನ್ನು ಸೃಷ್ಟಿಸಿದರು. ವಿದ್ವಾಂಸರು ಅನುಭಾವಗೀತೆ, ಹಾಡು ಎಂತಲೂ, ಆಧ್ಯಾತ್ಮಿಗಳು ಕೈವಲ್ಯ ಪದಗಳಂತಲೂ, ಜನಪದರು ಭಜನೆ ಹಾಡುಗಳೆಂತಲೂ ಕರೆದಿದ್ದಾರೆ. “ಸ್ವರವಚನ ಪದದಲ್ಲಿ ಸ್ವರ ಮತ್ತು ವಚನ ಎಂಬೆರಡು ಶಬ್ದಗಳಿವೆ. ಸ್ವರವೆಂದರೆ ಧ್ವನಿ, ಧಾಟಿ, ರಾಗ ಎಂಬರ್ಥಗಳಿವೆ. ಅಂದರೆ ರಾಗಹಿಡಿದು ಹಾಡಲು ಬರುವ ವಚನ ಸ್ವರವಚನ. ಕನ್ನಡದಲ್ಲಿ ರಾಗ ತಾಳಗಳನ್ನು ಹೊಂದಿಸಿ ಬರೆದ ಹಾಡುಗಳು ವಿಫುಲ ಸಂಖ್ಯೆಯಲ್ಲಿ ದೊರೆಯುತ್ತವೆ. ಭಕ್ತಿಪಂಥದ ಶರಣರು, ದಾಸರು ಈ ಬಗೆಯ ಹಾಡುಗಳನ್ನು ಬರೆದಿದ್ದಾರೆ. ದಾಸಕೂಟದವರು ಕೀರ್ತನೆಯಂದರೆ ಹೊಗಳಿಕೆ ಎಂದರ್ಥ. ಆದರೆ ಹಾಡು ಯಾವಾಗಲೂ ಹೊಗಳಿಕೆಯೇ ಆಗಿರಬೇಕಿಲ್ಲ. ಅದು ಹೊಗಳಿಕೆಯನ್ನು ಮೀರಿ ಮನ-ಆತ್ಮ-ಜೀವ, ಪರಮರನ್ನು ಕುರಿತು ಸಂಬೋಧಿಸಲೂಬಹುದಾಗಿದೆ. ಅದಕ್ಕಾಗಿ ಭಕ್ತರ ಹಾಡುಗಳನ್ನೆಲ್ಲಾ ಒಗ್ಗೂಡಿಸಿ ಕೀರ್ತನೆಗಳೆಂದು ಕರೆಯುವುದು ಸಮಂಜಸವಲ್ಲ. ಶರಣರು ವಚನಗಳಿಗೆ ರಚಿಸಿದ ಹಾಡುಗಳು ಮಾತ್ರ ‘ಸ್ವರವಚನ’ ಎಂಬ ಹೆಸರಿನಿಂದ ಪ್ರಚಾರದಲ್ಲಿವೆ ಎಂದು ಎಂ.ಜಿ. ಬಿರಾದಾರ ತಿಳಿಸುತ್ತಾರೆ.”[೮]

ಇಂತಹ ಸ್ವರವಚನ ಸಾಹಿತ್ಯಕ್ಕೆ ಕೊಡೇಕಲ್ಲ ಪರಂಪರೆ ಶ್ರೀಕಾರ ಹಾಕಿದೆ. ಕೊಡೇಕಲ್ಲ ಪರಂಪರೆಯ ‘ವಚನ ಸ್ವರವಚನ’ ಹೆಸರಿನ ಸಂಪುಟವನ್ನು ಡಾ. ಶಿವಾನಂದ ವಿರಕ್ತಮಠರವರು ಕನ್ನಡ ವಿಶ್ವವಿದ್ಯಾಲಯದಿಂದ ಸಂಪಾದಿಸಿ ಕೊಟ್ಟಿದ್ದಾರೆ. ದಿಗ್ಗಿ ಸಂಗಮನಾಥನನ್ನು ಕುರಿತು ಅನೇಕ ಸ್ವರವಚನಗಳು ಬಣ್ಣಿಸಿವೆ. ‘ಕರ್ತೃ ಎನ್ನೊಡೆಯ ಇದಕೇನು’, ‘ರಣಮಾಲೆಯನಾಡುತ ಬಂದೆ’, ‘ಗುರುಕರಣ ಪ್ರಭುವಿನಾಟವ ಬಂತು’, ‘ಗುರುಕಾಯ ಕೇಳಿನ್ನು ಗುರುಕಾಯ’, ‘ಮನೆದೇವರು ಮೈಲಾರಲಿಂಗ’, ‘ಅಂಗುಷ್ಟದಲಿ ಇಷ್ಟಲಿಂಗ’, ‘ಗುರುವೇ ನಿಮ್ಮಯ ಭಕ್ತಿ’ ಈ ಎಲ್ಲ ಹಾಡುಗಳಲ್ಲಿ ದಿಗ್ಗಿ ಸಂಗಮನಾಥನ ಉಲ್ಲೇಖವಿದೆ.

“ಕೊಡೇಕಲ್ಲ ಬಸವಣ್ಣನವರ ಸಾಹಿತ್ಯದಲ್ಲಿ ವರ್ಣಿತವಾದ ಸಂಗಮೇಶ್ವರ (ಸಂಗಯ್ಯ, ಸಂಗಮನಾಥ)ನನ್ನು ನೋಡುತ್ತಿದ್ದರೆ ಈತ ಆ ಕಾಲದ ಘನ ವ್ಯಕ್ತಿತ್ವದ ಗಣ್ಯನೇ ಇರಬೇಕು ಎನಿಸುತ್ತದೆ. ‘ಕಾನ ಕಾನ ಉತ್ತತ್ತಿ ಎಲ್ಲಿಗೆ ಬಂತೋ ಸಂಗಯ್ಯ’ ಎಂಬ ಜನಪದ ಆಟದಲ್ಲಿ ಉಕ್ತನಾದ ಸಂಗಯ್ಯ ಈತನೇ ಇರುವಂತಿದೆ. ಕಾನ ಕಾನ ಉತ್ತತ್ತಿ ಎಂಬುದು ‘ಖಾನ ಖಾನ ಒತ್ತೊತ್ತಿ’ ಇದ್ದಿರಬೇಕು. ಹಿಂದು-ಮುಸ್ಲಿಂ ಸಂಘರ್ಷಕಾಲದ ಈತನ ಹೋರಾಟವನ್ನು ಇದು ಸೂಚಿಸುತ್ತಿರಬೇಕು. ಕಾಲಜ್ಞಾನ ಸಾಹಿತ್ಯ ಸಾರುವವರು ಎತ್ತಿಕೊಳ್ಳುವ ಪಲ್ಲವಿ “ಸುವ್ವಿ ಬಾ ಸಂಗಯ್ಯ, ಸುವ್ವಿ ಬಾ ಲಿಂಗಯ್ಯ, ಸುವ್ವಿ ಬಾ ಚೆನ್ನಬಸವಯ್ಯ, ಸುವ್ವಿ ಎನ್ನುವಲ್ಲಿನ ಸಂಗಯ್ಯ ಈತನೇ ಇರುವಂತಿದೆ.”[೯]

### ೩.೧.೨. ಕೊಡೇಕಲ್ಲ ನೀಲಮ್ಮನ ಸ್ವರವಚನ ಸಾಹಿತ್ಯ

“ಕೊಡೇಕಲ್ಲ ಬಸವಣ್ಣನ ಪತ್ನಿಯಾದ ನೀಲಮ್ಮನ ಎರಡು ಸ್ವರವಚನಗಳು ಲಭ್ಯವಿದ್ದು ‘ಜೋ ಜೋ ಎನ್ನ ಜೋಗಿ ಮುನೇಶ.”[೧೦]

೩.೧.೩. ರಾಚಪ್ಪಯ್ಯನ ಕೃತಿಗಳು

ಕೊಡೇಕಲ್ಲ ಬಸವಣ್ಣನವರ ಹಿರಿಯ ಮಗನಾದ ರಾಚಪ್ಪಯ್ಯನು ೧. ಮಾಯಾ ಸಾಂಗತ್ಯ ೨. ಕಾಯಸಾಂಗತ್ಯ ೩. ಪ್ರಭುಚರಿತ್ರೆ ೪. ಗಿರಿಜಾಕಲ್ಯಾಣ ೫. ಮಹಾದೇವಿಯಕ್ಕನ ಸಾಂಗತ್ಯ ೬. ಸೌಂದರ ನಂಬಿಯಣ್ಣನ ರಗಳೆ ೭. ಸ್ವರ್ಗಾರೋಹಣ ೮. ಪಿಟ್ಟವ್ವೆ ಸಾಂಗತ್ಯ ೯. ಸಂಧಿವಚನ ೧೦. ಸುವ್ವಿ ವಚನ ಹೀಗೆ ದಶಕಾವ್ಯಗಳನ್ನು ರಚಿಸಿದ ರಾಚಪ್ಪಯ್ಯ 'ರಾಚ' ಅಂಕಿತದಲ್ಲಿ ತತ್ವಪದ ಸಾಹಿತ್ಯವನ್ನು ಬರೆದಿದ್ದಾನೆ. ಈತನ ಸಮಗ್ರ ಕೃತಿಗಳನ್ನು ಎಂಟು ಹಸ್ತಪ್ರತಿಗಳ ಸಹಾಯದಿಂದ ಡಾ. ಶಿವಾನಂದ ವಿರಕ್ತಮಠ ಅವರು ಕನ್ನಡ ವಿಶ್ವವಿದ್ಯಾಲಯದಿಂದ ಸಂಪಾದಿಸಿಕೊಟ್ಟಿದ್ದಾರೆ.

" 'ಸಕ್ಕಜಗನ್ನಡ' ಎಂಬ ಮಾತಲ್ಲಿ ಕವಿ ತನ್ನ ಸಂಸ್ಕೃತ ಪಾಂಡಿತ್ಯ ಪ್ರಿಯತೆಯನ್ನು ಸ್ಪಷ್ಟ ಪಡಿಸಿದ್ದಾನೆ.''[೧೧] "ವರ್ಣಕವಿಯೂ ಆದ ರಾಚಪ್ಪಯ್ಯನಿಗೆ ಕಥೆ ಏನಿದ್ದರೂ ನೆಪ ಅಷ್ಟೆ. ಆತನಿಗೆ ವರ್ಣನೆ ಹಾಗೂ ಬೋಧೆಯೇ ಮುಖ್ಯ. ಹರಿಹರ, ರತ್ನಾಕರವರ್ಣಿ ಮೊದಲಾದವರ ಕಾವ್ಯಗಳು ಇದಕ್ಕೆ ನಿದರ್ಶನ. ರಾಚಪ್ಪಯ್ಯನ ಕಾವ್ಯಗಳು ವರ್ಣನಾಪ್ರಧಾನ. ಇದೇ ಕವಿಯ ಗಿರಿಜಾಕಲ್ಯಾಣ ಇದಕ್ಕೆ ಉತ್ತಮ ನಿದರ್ಶನ.''[೧೨]

ರಾಚಪ್ಪಯ್ಯನ 'ಸುವ್ವಿವಚನ' ತ್ರಿಪದಿಗಳಲ್ಲಿ ಹಾಗೂ ತತ್ವಪದಗಳಾದ 'ಆನೆ ಬಂತು ಮದ್ದಾನೆ'ಯಲ್ಲಿ ಸಂಗಮನಾಥನ ಉಲ್ಲೇಖವಿರುವುದು ಕಂಡುಬರುತ್ತದೆ.[೧೩]

೩.೧.೪. ವೀರಸಂಗಪ್ಪಯ್ಯನ ಕೃತಿಗಳು

ಕೊಡೇಕಲ್ಲ ಬಸವಣ್ಣನವರ ಮೂರನೆಯ ಮಗನಾದ ಸಂಗಪ್ಪಯ್ಯನು ಸನ್ಯಾಸಿ. ಸಂಗಯ್ಯ ಲಿಂಗಾಜಮ್ಮರ ತನುಜ ವೀರಸಂಗಪ್ಪಯ್ಯ ಈತನು ಪ್ರತಿಭಾವಂತ ಕವಿ. ಕ್ರಿ.ಶ.೧೫೮೯ರಲ್ಲಿ ನಂದಿಯಾಗಮಲೀಲೆ ಸಂಧಿ ೧೫. ಪದ್ಯ ೧೧೦೦ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಹಾಗೆಯೇ ೧೪ ಬಿಡಿ ಸ್ವರವಚನಗಳನ್ನು, ಕಾಲಜ್ಞಾನದ ಕಟ್ಟಳೆಯನ್ನು, ರಗಳೆ ವಚನವನ್ನು, ಕೆಲವು ಹಾಡುಗಳು ತ್ರಿಪದಿ, ಗದ್ಯ, ರಗಳೆ, ಚೌಪದಿಯಲ್ಲಿ ರಚಿತವಾಗಿವೆ.[೧೪]

ನಂದಿಯಾಗಮಲೀಲೆ ಕೃತಿಯ ನಾಯಕನಾದ ಕೊಡೇಕಲ್ಲ ಬಸವಣ್ಣನು ಚಾರಿತ್ರಿಕ ವ್ಯಕ್ತಿಯಾದರೂ ಕಾವ್ಯ ಕರ್ತೃ ವೀರಸಂಗಪ್ಪಯ್ಯನು ೧೨ನೇ ಶತಮಾನದ ಕಲ್ಯಾಣ ಬಸವಣ್ಣನ ಅವತಾರವೆಂದು ಕಲ್ಪಿಸಿದ್ದಾನೆ. ಆದ್ದರಿಂದ ಈ ಕಾವ್ಯವು ಚರಿತ್ರೆಯ ಜೊತೆಗೆ ಐತಿಹ್ಯ-ಪುರಾಣ-ಲೀಲೆಗಳ ಸಮ್ಮಿಶ್ರರೂಪಿ ಚೌಕಟ್ಟನ್ನು ರೂಪಿಸಿಕೊಂಡಿದೆ. ಹೀಗಾಗಿ 'ನಂದಿಯಾಗಮಲೀಲೆ' ಕಾವ್ಯದ ಕಥಾಚೌಕಟ್ಟಿನಲ್ಲಿ ಕೊಡೇಕಲ್ಲ ಬಸವನಿಗೆ ಹದಿನಾಲ್ಕು ಅವತಾರಗಳನ್ನು ಲೀಲೆ, ಪವಾಡಗಳೆಂದು ಕಲ್ಪಿಸಲಾಗಿದೆ.[೧೫]

ವೀರಸಂಗಪ್ಪಯ್ಯನ ಕೃತಿಗಳನ್ನು ಸ್ವರವಚನಗಳು, ಕಾಲಜ್ಞಾನ ಕಟ್ಟಳೆಯನ್ನು ಒಳಗೊಂಡಂತೆ ನಂದಿಯಾಗಮಲೀಲೆ ಕೃತಿಯನ್ನು ಆಯ್.ಜಿ. ಕೊಡೇಕಲ್‌ಮಠ ಅವರು ಕೊಡೇಕಲ್ ಬಸವೇಶ್ವರ ಅಧ್ಯಯನ ಸಂಸ್ಥೆಯಿಂದ ಸಂಪಾದಿಸಿ ಕೊಟ್ಟಿದ್ದಾರೆ.

೧. **ನಂದಿಯಾಗಮಲೀಲೆ :** ಈ ಕೃತಿಯಲ್ಲಿ ೧೧ನೇ ಸಂಧಿಯ ೨೭, ೨೮, ೩೪, ೩೫, ೩೬ ಪದ್ಯಗಳಲ್ಲಿ ಹಾಗೂ ೧೪ನೇ ಸಂಧಿಯ ೧೦, ೧೪, ೧೯, ೨೧, ೨೩ನೇ ಪದ್ಯಗಳಲ್ಲಿ ದಿಗ್ಗಿ ಸಂಗಮನಾಥನನ್ನು ಚಿತ್ರಿಸಲಾಗಿದೆ. ನಂದಿಯಾಗಮಲೀಲೆಯ ಅನುಬಂಧದಲ್ಲಿ ಸೂಚಿಸುವ ಕಾಲಜ್ಞಾನ ಕಟ್ಟಳೆ ಮತ್ತು ಸ್ವರವಚನಗಳಲ್ಲಿ ಸಂಗಮನಾಥನ ಉಲ್ಲೇಖವನ್ನು ಪ್ರಸ್ತಾಪಿಸಲಾಗಿದೆ.

"ಈ ಕೃತಿಗಳಿಂದ ಕೊಡೇಕಲ್ಲ ಬಸವಣ್ಣನವರ ಗುರು ಸಂಗಮನಾಥ ಹಸ್ತಮಸ್ತಕಮಾಡಿ ಹನ್ನೊಂದು ಬಗೆಯ ಅಮರಗನ್ನಡ ಲಿಪಿಯನ್ನು ಕೊಟ್ಟು ದಿಗ್ಗಿಯನ್ನು ಅಮರಕಲ್ಯಾಣವಾಗಿ ಮಾಡಿದ ಶ್ರೇಯಸ್ಸು ಇವರದಾಗಿದೆ."[೧೬]

೩.೧.೫. ಗುಂಡಬಸವೇಶ್ವರ ಚರಿತ್ರೆ

ಡಾ.ಎಂ.ಎಂ. ಕಲಬುರ್ಗಿ, ಸಂಗಪ್ಪಯ್ಯಸ್ವಾಮಿಯವರು ಸಂಪಾದಿಸಿದ ಈ ಕೃತಿಯನ್ನು ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಪ್ರಕಟಿಸಿದೆ. ಗುಂಡಬಸವೇಶ್ವರ ಚರಿತ್ರೆಯು ಏಳು ಸಂಧಿಯನ್ನು ೧೪೫ ಪುಟಗಳನ್ನು ಹೊಂದಿದೆ. ಈ ಕೃತಿ ಕಂದ ಛಂದಸ್ಸಿನಲ್ಲಿ ರಚಿತವಾಗಿದೆ. ೧. ಶರಣಸ್ತುತಿ ೨. ಗುಂಡ ಬಸವೇಶ್ವರನ ಶಿವಸನ್ನಿಧಿ ಕಥನ ೩. ಗುಂಡಬಸವೇಶ್ವರ ಅವತಾರ ಕಥನ ೪. ಗುಂಡಬಸವೇಶ್ವರನ ಸಂಸಾರ ಕಥನ ೫. ಗುಂಡಬಸವೇಶ್ವರ ಲೀಲಾಕಥನ ೭. ಗುಂಡಬಸವೇಶ್ವರನ ಐಕ್ಯ ಕಥನ ಇವುಗಳ ಕೆಲವು ಸಂಧಿಗಳಲ್ಲಿ ದಿಗ್ಗಿಯ ಸಂಗಮನಾಥನ ಉಲ್ಲೇಖವಿರುವುದು ಕಂಡುಬರುತ್ತದೆ.

"ನಡುಗನ್ನಡ ಸಂದರ್ಭವು ಕರ್ನಾಟಕದ ಅಸ್ಮಿತೆ ಅವತಾರಗೊಳ್ಳಲಾರಂಭಿಸಿದ ಅವಧಿಯಾಗಿದೆ. ಅನ್ಯಧರ್ಮ, ಅನ್ಯ ಭಾಷೆಗಳ ಪ್ರಭಾವಗಳಿಂದ ಬಿಡಿಸಿಕೊಂಡು, ದೇಶೀಧರ್ಮ ದೇಶಿಭಾಷೆಗಳ ಅನುಷ್ಠಾನದ ಹೊಸ ಪ್ರಯತ್ನ ಈಗ ಆರಂಭವಾಯಿತು. ಇದರ ಫಲವಾಗಿ ಭಾಷೆಯಲ್ಲಿ ಸ್ಥಳೀಯ ಪ್ರಜ್ಞೆಯ ವಚನವಾಂಙ್ಮಯ, ಧರ್ಮದಲ್ಲಿ ಸ್ಥಳೀಯ ದರ್ಶನ ಮತ್ತು ವ್ಯಕ್ತಿ ಚರಿತ್ರೆಗಳು ಉದಯವಾಗತೊಡಗಿದವು. ಇಂಥ ಸಂದರ್ಭದಲ್ಲಿ ಸಹಜವಾಗಿಯೇ ಕಲ್ಪಿತ ಪುರಾಣಗಳಿಗೆ ಬದಲು ಘಟಿತ ಚರಿತ್ರೆಗಳ ಪುರಾಣೀಕರಣ ಕ್ರಿಯೆ ಆರಂಭವಾಗುತ್ತದೆ. ಆಗ ಸಹಜವಾಗಿಯೇ ಆಯಾ ಪ್ರದೇಶಗಳ ಭೌತಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಅಂಶಗಳು ನೇರವಾಗಿ ಕೃತಿ ರೂಪ ಪಡೆಯತೊಡಗುತ್ತವೆ. ಪ್ರಸ್ತುತ ಕೃತಿಯಲ್ಲಿ ಮೂಡಿ ಬರುತ್ತವೆ."[೧೭]

ಈ ಕೃತಿಯ ೧ನೇ ಸಂಧಿಯ ೪೪, ೨ನೇ ಸಂಧಿ ೧೧೯, ೪ನೇ ಸಂಧಿ ೧೫, ೧೬, ೧೭, ೧೮ ಪದ್ಯಗಳಲ್ಲಿ ಸಂಗಮನಾಥನ ಉಲ್ಲೇಖವಿದೆ. ಈ ಎಲ್ಲ ಪದ್ಯಗಳನ್ನು ಗಮನಿಸಿದಾಗ ದಿಗ್ಗಿ ಸಂಗಮನಾಥ

ನಗರದ ಹೊರಗೆ ಮಠ ಕಟ್ಟಿದನೆಂಬ ಪ್ರತೀತಿ ಇರುವುದರೊಂದಿಗೆ ಅಮರ ಕಲ್ಯಾಣದ ಕರ್ತೃ ಈತನೇ. ದಿಗ್ಗಿಯೇ ಅಮರಕಲ್ಯಾಣ ಎಂಬುದು ಸ್ಪಷ್ಟವಾಗಿದೆ.

### ೩.೧.೬. ಮಂಟೇಸ್ವಾಮಿ ಸಾಹಿತ್ಯ

"ಎಂಟು ತ್ರಿಪದಿಗಳಿಂದ ಕೂಡಿದ ಕಾಲಜ್ಞಾನ ಸಾಹಿತ್ಯದಲ್ಲಿ ಪ್ರಸ್ತುತ ಕಾಲಜ್ಞಾನ ಕೃತಿಯ ಕೊನೆಗೆ ಸಂಗಮೇಶ್ವರ ಕುಮಾರ ಮಂಟೇದಲಿಂಗ ಸಾರಿದ ಡಂಗುರ ಇಲ್ಲಿ ಉಕ್ತನಾದ ಸಂಗಮೇಶ್ವರ ಕೊಡೇಕಲ್ ಬಸವನ ಗುರು ಆರೂಢ ಸಂಗಮೇಶ್ವರನಲ್ಲದೆ ಬೇರೆಯಲ್ಲ"[೧೮] ಎಂದು ತಿಳಿದುಬರುತ್ತದೆ.

### ಕೊನೆಯ ಟಿಪ್ಪಣಿಗಳು

೧. ಕೊಡೇಕಲ್ಲ ಬಸವಣ್ಣ: ಒಂದು ಅಧ್ಯಯನ- ಡಾ. ಬಸವಲಿಂಗ ಸೊಪ್ಪಿಮಠ, ಪುಟ ೧೨೪

೨. ರಾಚಪ್ಪಯ್ಯನ ಕೃತಿಗಳು: ಸಂ. ಡಾ. ಶಿವಾನಂದ ವಿರಕ್ತಮಠ, ಪ್ರಸ್ತಾವನೆ ಪುಟ ೧೦

೩. ನಂದಿಯಾಗಮಲೀಲೆ : ಸಂ. ಆಯ್.ಜಿ. ಕೊಡೇಕಲ್ಲಮಠ, ಪ್ರಸ್ತಾಪನೆ ಪುಟ ೬

೪. ಬಸವಯುಗದ ವಚನೇತರ ಸಾಹಿತ್ಯ : ಸಂ. ಡಾ. ಕೆ.ರವೀಂದ್ರನಾಥ, ಪುಟ ೨೩

೫. ಬಸವಯುಗದ ವಚನೇತರ ಸಾಹಿತ್ಯ : ಸಂ. ಡಾ. ರವೀಂದ್ರನಾಥ, ಪುಟ ೨೪

೬. ಕೊಡೇಕಲ್ಲ ಬಸವಣ್ಣ ಒಂದು ಅಧ್ಯಯನ: ಬಸವಲಿಂಗ ಸೊಪ್ಪಿಮಠ, ಪುಟ ೪೬೩

೭. ಕೊಡೇಕಲ್ ವಚನವಾಕ್ಯ : ಬಸವಲಿಂಗ ಸೊಪ್ಪಿಮಠ, ಪುಟ ೧೪೦

೮. ಬಸವಯುಗದ ವಚನೇತರ ಸಾಹಿತ್ಯ : ಸಂ. ಡಾ. ಕೆ. ರವೀಂದ್ರನಾಥ, ಪುಟ ೨೫

೯. ಕೊಡೇಕಲ್ ವಚನವಾಕ್ಯ : ಸಂ. ಡಾ. ಬಸವಲಿಂಗ ಸೊಪ್ಪಿಮಠ, ಪುಟ ೯

೧೦. ವಚನ ಸ್ವರವಚನ : ಸಂ. ಡಾ. ಶಿವಾನಂದ ವಿರಕ್ತಮಠ, ಪುಟ ೪೧೪

೧೧. ರಾಚಪ್ಪಯ್ಯನ ಕೃತಿಗಳು : ಸಂ. ಡಾ. ಶಿವಾನಂದ ವಿರಕ್ತಮಠ, ಪ್ರಸ್ತಾವನೆ, ಪುಟ ೧೧

೧೨. ಅದೇ ಪುಟ ೧೨

೧೩. ಅದೇ ಪುಟ ೪೧೨

೧೪. ನಂದಿಯಾಗಮಲೀಲೆ : ಸಂ. ಆಯ್.ಜಿ. ಕೊಡೇಕಲ್ಲಮಠ, ಪ್ರಸ್ತಾವನೆ, ಪುಟ ೬

೧೫. ಅದೇ ಪುಟ ೬

೧೬. ಅದೇ ಪುಟ ೧೭೯

೧೭. ಗುಂಡ ಬಸವೇಶ್ವರ ಚರಿತ್ರೆ : ಸಂ. ಡಾ. ಎಂ.ಎಂ. ಕಲಬುರ್ಗಿ, ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ xxv

೧೮. ಕೊಡೇಕಲ್ಲ ಬಸವಣ್ಣ: ಒಂದು ಅಧ್ಯಯನ, ಡಾ. ಬಸವಲಿಂಗ ಸೊಪ್ಪಿಮಠ, ಪುಟ ೨೩೪

## ಅಧ್ಯಾಯ ೪

# ದಿಗ್ಗಿ ಸಂಗಮನಾಥ : ಚಾರಿತ್ರಿಕ ಅಧ್ಯಯನ

ದಿಗ್ಗಿ ಸಂಗಮನಾಥ ಚಾರಿತ್ರಿಕ ಸಂಗತಿಗಳನ್ನು ಕುರಿತು ಕೊಡೇಕಲ್ ಬಸವಣ್ಣನವರ ಕಾಲಜ್ಞಾನ ಸಾಹಿತ್ಯ, ಸ್ವರವಚನ ಸಾಹಿತ್ಯ, ರಾಚಪ್ಪಯ್ಯನ ಕೃತಿಗಳಾದ ಸುವ್ವಿವಚನ ಹಾಗೂ ಪ್ರಭುಚರಿತೆ, ವೀರಸಂಗಪ್ಪಯ್ಯನ ನಂದಿಯಾಗಮಲೀಲೆ ಮತ್ತು ಆತನ ಸ್ವರವಚನಗಳು ಹಾಗೂ ಗುಂಡ ಬಸವೇಶ್ವರ ಚರಿತ್ರೆ, ಸಾಲೋಟಗಿ ಶಿವಯೋಗಿಗಳ ಡಂಗುರ ಪದಗಳು ಮಹತ್ವದ ಸಂಗತಿಗಳನ್ನು ಬಿಚ್ಚಿಡುತ್ತವೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ವಿನೂತನವಾದ, ಉತ್ಕೃಷ್ಟವಾದ ಸಾಹಿತ್ಯ ವಚನ ಸಾಹಿತ್ಯ. ಸರ್ವರಿಗೂ ಮಾನವೀಯ ಮೌಲ್ಯಗಳನ್ನು ತಿಳಿಸುವ ಉದ್ದೇಶದಿಂದಾಗಿ ನಡುಗನ್ನಡ ಶೈಲಿಯಲ್ಲಿ ಸರಳವಾಗಿ, ಸುಲಭವಾಗಿ ರಚಿಸಿದ್ದರಿಂದ ಜನರ ಮನವನ್ನು ತಲುಪಲು ಸಾಧ್ಯವಾಯಿತು. ೧೨ನೇ ಶತಮಾನದ ಶರಣರು ನಡೆ, ನುಡಿ, ನೋಟದಲ್ಲಿ ಪರಿಶುದ್ಧರನ್ನಾಗಿ ಮಾಡಿ ಅವರಲ್ಲಿರುವ ಮೂಢನಂಬಿಕೆ, ಅಜ್ಞಾನ, ಜಾತೀಯತೆಯನ್ನು ಹೋಗಲಾಡಿಸಲು ಹಗಲಿರುಳು ಶ್ರಮಿಸಿದರು. ೧೫ನೇ ಶತಮಾನದ ನಂತರದಲ್ಲಿ ಅಂದರೆ ೧೬ನೇ ಶತಮಾನದಲ್ಲಿ ಮತ್ತೆ ಧರ್ಮಗಳ ತಿಕ್ಕಾಟ ಆರಂಭವಾಯಿತು.

ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ನಡುವಿನ ಪ್ರದೇಶವನ್ನು 'ದೋಅಬ್' ಎನ್ನುವರು. ದೋಅಬ್ ಪ್ರದೇಶವನ್ನು ಸಗರನಾಡೆಂದು ಕರೆಯುತ್ತಾರೆ. ಬಹುಮನಿ ಸಾಮ್ರಾಜ್ಯ ಮತ್ತು ವಿಜಯನಗರ ಸಾಮ್ರಾಜ್ಯ ಸಗರ ನಾಡನ್ನು ವಶಪಡಿಸಿಕೊಳ್ಳಲು ಯದ್ಧವನ್ನು ಸಾರಿದವು. ಇದು ಹಿಂದೂ-ಮುಸ್ಲಿಂ ಧರ್ಮಗಳ ತಿಕ್ಕಾಟಕ್ಕೆ ಕಾರಣವಾಯಿತು. ಈ ಸಂಘರ್ಷವು ಬಾನಂಗಳವನ್ನು ತಲುಪಿತು. ಇಂತಹ ಸಂದಿಗ್ಧವಾದ ಸ್ಥಿತಿಯಲ್ಲಿ (ಆರೂಢ) ಸಂಗಮನಾಥನು ಉದಯಿಸಿದನು. ಹಿಂದೂ-ಮುಸ್ಲಿಂರಲ್ಲಿ ಉಂಟಾದ ಕಲಹವನ್ನು ಹೋಗಲಾಡಿಸಿ ಭಾವೈಕ್ಯತೆ ಉಂಟುಮಾಡಲು ಇಷ್ಟಲಿಂಗ ತೊರೆದು ಪ್ರಾಣಲಿಂಗಿಯಾಗಿ ಆರೂಢ ಪಂಥವನ್ನು ಸ್ವೀಕರಿಸಿ ಆರೂಢ ಸಂಗಮನಾಥನಾದನು. ಈ ಆರೂಢ ಸಂಗಮನಾಥನೇ ದಿಗ್ಗಿಯ ಸಂಗಮನಾಥನಾಗಿದ್ದಾನೆ.

ಕೊಡೇಕಲ್ಲ ಬಸವಣ್ಣನವರ ಸ್ವರವಚನಗಳಲ್ಲಿ ಸಂಗಮನಾಥನನ್ನು ಕುರಿತು ಹೀಗೆ ಕೊಂಡಾಡಲಾಗಿದೆ.

ಒಡನಾಡಿ ಬಂದನು ಒಡೆಯ ಸಂಗಮನಾಥನ
ನಡೆವ ಸರ್ಪನ ಹೆಡೆಯೊಳಗಣ ಪದ್ಮದಂತೆ
ಕಡೆ ಆಟವು ಬಂತು ಕಲಹ ಕಾರಣ ಮುಂದೆ
ನುಡಿ ದೃಷ್ಟಗಳ ನೋಡಿ ಕುಡಿ ಮಿಂಚಿದಂತೆ[12]

ಆರೂಢ ಸಂಗಮನಾಥನು ಶಿಷ್ಯನಾದ ಕೊಡೇಕಲ್ ಬಸವಣ್ಣನವರಿಗೆ ಒಡನಾಡಿಯಾಗಿ, ಬೆನ್ನೆಲುಬಾಗಿ ಕೈ ಹಿಡಿದು ನಡೆಸಿದ ಶ್ರೇಯಸ್ಸು ಇವರದು. ಸರ್ವ ಸಾಧನೆಗಳಿಗೆ ಮೂಲ ಸಂಗಮನಾಥ ನಾಗಿದ್ದಾನೆ.

ಇಹವ ಕಾಣದ ಅರ್ಥ ಪರಕೆ ನಿಲ್ಕದು ವ್ಯರ್ಥ
ಇಹ ಒಂದೆ ಪರ ಒಂದೆ ಎರಡರಿಂದ ಅನರ್ಥ
ಇಹ ಪರವ ಕಾಣಗೂಡದು ದುಃಖದ ಹರ ವಶವು
ಇಹದಿಂದ ನಿಂತಿತು ಇಂತು ಲೋಕಾದಿ ಲೋಕವೆಲ್ಲ
ಪರ ಪರವಸ್ತುವೆ ಪರಿಮಳವು ಎಸೆದಂತೆ
ಪರಿ ಏನು ಹಿಡಿವುದಕ್ಕೆ ಪರಬ್ರಹ್ಮ ಲಿಂಗವನು
ಪರಂಜ್ಯೋತಿ ಪ್ರಕಾಶ ಸಂಗಮನಾಥನು.
ಪರಿಪೂರ್ಣನೈದಾನೆ ಪ್ರಥಮದಲಿ ನಿಶ್ಚಟನು
ಪುರುಷ ಮೃಗದಂತೆ ತನ್ನ ನಡೆಲಿಂಗ ನುಡಿಲಿಂಗ
ಪುರುಷೋತ್ತಮನವನು ಪೂರ್ವಾಚಾರಿ ಸಂಗನ ಬಸವ
ಪುರಾತರಿಗೆಲ್ಲ ಪುಣ್ಯನಿಧಿ ಸ್ಥಾನಿಕ
ಪೂರ್ವ ನಿಃಪುರುಷನವ ಪೃಥ್ವಿ ಪಾಲಿಪನು.
ಪೂರ್ವಿಕನು ಜಗದ ಉತ್ಪತ್ಯ ಸ್ಥಿತಿ ಲಯಕೆ
ಸರ್ವ ಜೀವ ದಯಾ ಪರಿ ಸಂಗನಬಸವ
ಪರದೈವ ಇನ್ನುಂಟೆ ಶಿವಭಕ್ತ ಹೊರತಾಗಿ[13]

ಅಜ್ಞಾನವನ್ನು ತೊಲಗಿಸಿ ಜ್ಞಾನವ ಬಿಂಬಿಸಿದ ಪರಂಜ್ಯೋತಿ ಸಂಗಮನಾಥನು ನಿಃಕಾಯದವನು. ಸೃಷ್ಟಿ, ಸ್ಥಿತಿ, ಲಯಕರ್ತನಾಗಿದ್ದಾನೆ.

ಅಷ್ಟ ದಿಕ್ಕುಗಳನೆಲ್ಲ ಒಂದು ಮಾಡಯ್ಯ ಹೋಗಿ
ಅಷ್ಟಮದ ಕವಿದಾದೆ ಅಜ್ಞಾನ ತುಂಬಿಯದೆ
ಪಟ್ಟಕ್ಕೆ ಮೂರು ರಾಜರು ಹೋರಾಡುತ್ತೈದಾರೆ
ಹುಟ್ಟಿದ ರಾಜಸವನು ಹೋಗಿ ನೀ ಮಾಡೆನಲು
ದೃಷ್ಟ ವರವನು ಕೊಟ್ಟು ಮಡಿವಾಳ ವೀರಂಗೆ
ತುಟ್ಟಿ ತುದಿಯಲಿ ನೀನು ಆರ್ಭಟವ ಮಾಡೆನಲು
ತೊಟ್ಟುಕೊಂಡನು ಸ್ವಾಮಿ ಕೊಟ್ಟ ವಜ್ರಾಂಗಿ ಜೋಡು
ಕೊಟ್ಟನು ವಾಚಸಿದ್ಧಿಯನು ಸಂಗಮೇಶ್ವರ[೩]

ಸಂಗಮನಾಥನು ಅಷ್ಟದಿಕ್ಕುಗಳಲ್ಲಿರುವ ಮನುಜರು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಅಷ್ಟಮದಗಳಿಂದ ತುಂಬಿಕೊಂಡಿದ್ದಾರೆ. ಅದಕ್ಕಾಗಿ ಅಜ್ಞಾನವನ್ನು ಹೋಗಲಾಡಿಸಿ ಸುಜ್ಞಾನವನ್ನು ತುಂಬುವಂತವನು ನೀನಾಗಿಂದು ಕೊಡೇಕಲ್ಲು ಬಸವನಣ್ಣವನಿಗೆ ವಾಚಸಿದ್ಧಿಯನು ಕೊಟ್ಟನು.

ವೃಷಭಪತಿ ಬಂದಾನೆ ವ್ರತವನಡಗಿಸಿ ಅಹನೆ
ವಿಷ ವಾಕ್ಯವನು ನುಡಿಸುತಾನೆ ಲೆಂಕನ ಕೈಯ
ಹುಸಿಯಲ್ಲವು ಖಂಡಜ್ಞಾನ ಸಂಗಯ್ಯನದು
ವಿಷದ ಮಳೆ ಕರೆದೀತು ಬೀಡಾರವನು ಬಿಟ್ಟು
ಉಸುರಿದನು ಲೆಂಕನೊಳು ಇಂತು ಆಯಿತೆಂದು
ಇಂತೀ ಸಂವತ್ಸರ ಈ ಸ್ಥಿತಿಗಳೆಂದು ಏನಲಿಲ್ಲ
ಭಾಷೆ ಪಾಲಿಪನು ಎನ್ನೊಡೆಯ ಸಂಗಮನಾಥ
ಆಭಾಸ ದೈವದ ಶಿಖಾಮಣಿಯೆಂಬ ಬರಿದಂಕ ಜಗ
ದೀಶನೀನೊಬ್ಬನೆ ಕೃಪಾಲ ಸಂಗಯ್ಯ
ದೂಷಿಕರ ಬಾಯಲಿ ಸೀಸವ ಕಾಸಿ ಎರೆದಂತೆ
ಬಾಸುಳ ಬಡಿಗಲ್ಲನು ತಂದೊಡ್ಡುತ್ತೈದಾನೆ[೪]

ನುಡಿಯಲ್ಲಿ ನಡೆಯಲ್ಲಿ ಪರಿಶುದ್ಧವನ್ನಾಗಿಸಿದ ಎನ್ನೊಡೆಯ ಸಂಗಮನಾಥನು ದುಷ್ಟರನ್ನು ಶಿಷ್ಟರನ್ನಾಗಿ ಪರಿವರ್ತಿಸುವಾತ, ಜಗದೀಶ, ಕೃಪಾಳು ಎನ್ನಗುರುವೆ ಎಂದು ಕೊಡೇಕಲ್ಲ ಬಸವಣ್ಣನವರು ಸ್ಮರಿಸಿದ್ದಾರೆ ಎಂಬುದು ರಗಳೆ, ವಚನದಿಂದ ತಿಳಿದುಬರುತ್ತದೆ.

ಲಿಂಗಪ್ರಭುವಿನ ವಾಲ್ಯದಲಿ ಸೂರ್ಯನ ಕಳಸ
ಲಿಂಗನ ವಾಲ್ಯಕೆ ಪಡುವಲ ಬಸವನ ವಾಲ್ಯಕೆ
ಚಂದ್ರ ಉದಯಿಸಿದಂತೆ ಆ ಕಳಸವೆದ್ದಿತು
ಪಂಚಕೋಶವು ಪಂಚ ಕಲ್ಯಾಣವಾದೀತು
ತುಂಗಭದ್ರೆಯ ದಡವು ತುಂಬೀತು ವಿಸ್ತೀರ್ಣ
ಜಂಬುನಾಥನ ಎಡೆಗೆ ಸಂಗಯ್ಯ ನಿಂದಾನು
ಡಂಭಕದ ಶಿಲೆಯನೆಲ್ಲವ ಕಿತ್ತಿ ಹಾಕ್ಯಾರು
ಶಂಭುವಿನ ನಿಶೂನ್ಯ ಸಿಂಹಾಸನವಿಕ್ಕೀತು
ಅಂಬಿಕೆ ಪರ್ವತವು ಜಾಳೀಂದ್ರವಾಯಿತು
ಶಂಭು ಸಂಗಮನಾಥನ ವಾಲಗವ ಮಾಡ್ಯಾರು
ನಂಬಿದ ಶರಣರೆಲ್ಲ ಕುಂಚ, ಕಾಳಾಂಜಿ ಹಿಡಿದಾರು
ಅಂಬುಧಿ ಬಸವಪ್ರಭು ಅಲ್ಲಿಗೆ ನಡೆದಾನು
ಲಿಂಗ ನಿಷ್ಠಯವೆಲ್ಲ ಪ್ರತ್ಯಕ್ಷ ನುಡಿಸ್ಯಾನು[೫]

ಕೃಷ್ಣಾ ಮತ್ತು ತುಂಗಭದ್ರೆಯ ನಡುವಿನ ಪ್ರದೇಶವೇ ಸಗರನಾಡು. ನದಿಗಳು ತುಂಬಿ ಹರಿಯುತ್ತ ಪೃಥ್ವಿಯನ್ನು ಕಂಗೊಳಿಸಿವೆ. ಅಂತಹ ಸುಂದರವಾದ ಪ್ರಕೃತಿಯ ಮಡಿಲಲ್ಲಿ ಸಂಗಮನಾಥನು ನೆಲೆದಾನು. ಈ ಶಂಭುವಿನ ಕೀರ್ತಿ ದೆಸೆದೆಸೆಗಳಲ್ಲಿ ಹಬ್ಬಿದೆ. ಆಗ ಅಂಬುಧಿಯ ತಡಿಯಲ್ಲಿ ಶಿಷ್ಯನಾದ ಶಿವಭಕ್ತನಾದ ಬಸವಣ್ಣನವರಿಗೆ ಗುರು ಮೂರ್ತಿಯು ತನ್ನ ಜ್ಞಾನವನ್ನು ಧಾರೆಯೆರೆದಿದ್ದಾನೆ.

ಅಂದಿನ ಮಣಿಯಕೆಲ್ಲರು ಇದುರು ಜರಿದವರು
ಇಂದಿನ ಮಣಿಯಕಂಜರೆ
ಅಂದು ಬಂದವರು ಸಮರ್ಥರಹುದೈ ಅವರು
ತಂದೆ ನೀ ಎನಗೆ ಕೃಪೆ ಮಾಡೋ
ಮುಂದೆ ಬಸವಪ್ರಭು ಸಂಗಮೇಶ್ವರ ನೀನು
ಬಂದು ಆಲಸ್ಯ ಮಾಡಿದರೆ
ಹಿಂದಣ ಮಣಿಯದೋಪಾದಿ ಎನುತಾರೆ
ಬಂಧಿಸುತಲಾರೆ ಇದುರಿಟ್ಟು[೬]

ಕೇಳು ಸದ್ಗುರು ಸಂಗನಾಳು ತ್ರೈತ್ರಿಸಕೋಟಿ ದೈವದ
ಮೇಳೈಸಿ ಗಗನದಿಂದಲಿ ಧಾಳಿಯಿಳಿಯಿತೊ[೭]

ಅಸದಳಿಯ ಮಾತುಗಳ ಆಡುವರೆ ಒಂದೊಂದು
ಕಿಸಕುಳವು ನಿಮ್ಮ ನಡೆ-ನುಡಿ ಎಲ್ಲವು
ಬೆಸೆನು ನೋಡಿ ಇನ್ನೆಲ್ಲ ಸಸಿನಗೆ ಮುಂದಿನ್ನು
ಬಿಸಿಯ ಬಿಟ್ಟರು ಮಾಡುವ ಮಾಟಕೆ
ಶಶಿಧರ ಸಂಗಮೇಶ್ವರನ ನುಡಿ ಮರ್ತ್ಯದೊಳು
ಹೊಸತೀಗ ಬಂತು ರಸುಮೆಯ ಬಹಳವ
ಪಸರಿಸುವ ಅಬ್ಬರವ ಬಂದಿದೆ ನಂಬಿ ನಂಬಿನ್ನು
ದೆಸೆದೆಸೆಗೆ ಭುಗಿಲು ಭುಗಿಲಂತೇಳುತ[೮]

ಹೀಗೆ ಸ್ವರವಚನಗಳಲ್ಲಿ ದಿಗ್ಗಿ ಸಂಗಮನಾಥನ ಆಗಮನದ ಅಗತ್ಯವನ್ನು ಹೇಳುವುದರ ಮೂಲಕ ಕಲ್ಯಾಣದ ನಡೆ-ನುಡಿ, ಮರ್ತ್ಯದ ಬದುಕನ್ನು ಹೊಸದಾಗಿ ರೂಪಿಸುವ ಪರಿಯನ್ನು ಬಣ್ಣಿಸಲಾಗಿದೆ.

ನರಿಯ ಹಿಂದ ಚೌ ಶ್ವಾನಗಳು
ಮುರಿದೋಡಿ ಬಂದವು ಬೇಗ
ನರ ಬಣಮಿಗಳು ಆದವಾಗ
ಗುರು ಸಂಗಮೇಶ್ವರನ ಪ್ರಭೆಯಾಗ್[೯]

ಕಪ್ಪು ಕಲ್ಮಶ ಇದ್ದುದಕೆ ತಪ್ಪುಗಗಳನು ಮಾಡಿ
ಆಪ್ತ ಸಂಗಮನಾಥನಿಟ್ಟ ತಪ್ಪುಗಾಜ್ಞೆ ನೋಡಿರೊ[೧೦]

ಗುಟ್ಟಿನಿಂದ ತೋರ ಹುಟ್ಟಿಸಿದ ಮೂಲವಳಿಯ
ಕಷ್ಟದಿಂದ ಹುಟ್ಟಿ ಕಲಹವೆ ಬಂದಿತು
ನಿಷ್ಠೆಯುಳ್ಳ ಸಂಗಮೇಶ್ವರ ಕಟ್ಟಿ ಕಡಿಗೆ ಇಟ್ಟ
ಕೊಟ್ಟ ಗುರುಕೃಪೆಯ ಕಲ್ಮಶವಿಲ್ಲದ್[೧೧]

ಅನುಪುಂಟು ಅವರಿಗೆ ಸಲೆ ಸಂಗನರ್ಪಿತ
ಬಲುವುಂಟು ಅವರ ಬಲ್ಲವರು
ಕಲಹವನಳಿದವರು ಹಮ್ಮಳಿದಿಪ್ಪವರು
ಸುಲಭವ ಸೂಕ್ಷ್ಮಗಳನು[೧೨]

ನಡುಗದ್ದಿಗೆ ಸಂಗಮೇಶನು ಕುಳ್ಳಿರ್ದ
ಒಡೆತನ ದಂಡನಾಯಕನಿಗೆ

ಹಿಡಿವಂಡ ಸರಕು ಸಕಲ ಸ್ವಯವನು ತಂದ
ಬಿಡು ಚಿನ್ನವಾಲರಂಗಡಿಯಾ[೧೩]

ಹಿಂದೂ ಮತ್ತು ಮುಸ್ಲಿಂರ ಮಧ್ಯದಲ್ಲಿ ನಡೆದ ಸಂಘರ್ಷವನ್ನು ಗಮನಿಸಿದ ಸಂಗಮನಾಥ ಈ ರೀತಿ ತಿಳಿಸುವರು. ಕೋಮುವಾದ ಕಲಹವನ್ನು ನಿಷ್ಠೆಯಿಂದ ಪ್ರಾಣಲಿಂಗದ ಮಹತ್ವವನ್ನು ತಿಳಿಸಿ ದ್ವಿಪ್ರಭುತ್ವಗಳಲ್ಲಿ ಐಕ್ಯತೆಯ ಮನೋಭಾವನೆ ಮೂಡಿಸಿದೆ. ಸರ್ವರನ್ನು ಸಮಾನವಾದ ದೃಷ್ಟಿಕೋನದಿಂದ ನೋಡಿದ ಪರಿಣಾಮದಿಂದಾಗಿ ಸರ್ವರನ್ನು ಒಂದೂಗೂಡಿಸಲು ಸಾಧ್ಯವಾಯಿತು.

ಸಕಲ ಸ್ಥಳಗಳಿಗೆ ಮುಕುರ ಕೈಲಾಸ
ಲಿಖಿತ ಪಾಪಗಳ ದೂರ ವಿನಾಶ
ಭಕುತಿ ಶಿವಶರಣೆಯರ ಸಲಹುವ ಈಶ ನಮ್ಮ
ಶಿಖರ ಸಿಂಹಾಸನದ ಗುರು ಸಂಗಮೇಶ[೧೪]

ದಿಗ್ಗಿಯ ಸಂಗಮನಾಥನು ಸಂಚರಿಸುತ್ತ ಹಲವು ಪ್ರದೇಶ ಜನತೆಯಲ್ಲಿ ಜ್ಞಾನಜ್ಯೋತಿಯನ್ನು ಬಿಂಬಿಸಿ ಅವರಲ್ಲಿರುವ ಪಾಪಕರ್ಮಗಳನ್ನು ತೊಲಗಿಸಿ ಸಲುಹಿದ. ಭಕ್ತರನ್ನು ಅಥವಾ ಶಿಷ್ಯರನ್ನು ಉದ್ಧರಿಸಿದ ಗುರುವಾಗಿದ್ದಾನೆ.

ಕೊಡೇಕಲ್ ಬಸವಣ್ಣನ ಮಗ ರಾಚಪ್ಪಯ್ಯ ತನ್ನ ಸುವ್ವಿವಚನಗಳಲ್ಲಿ ಸಂಗಮನಾಥ ಐಕ್ಯಸ್ಥಳವೇರಿದ ಜಲದುರ್ಗವನ್ನು ಉಲ್ಲೇಖಿಸುತ್ತಾನೆ.

ದೇವದುರ್ಗದ ಮೇಲೆ ದೇವ ಸಿಂಹಾಸನ
ದೇವೇಶ ಬಸವನೊರೆದಿಂದ ಬ್ಯಾಡರ
ಜೀವ ನಮ್ಮೊಳಗೆ ಗೆಲವುಂಟು[೧೫]

ಕೊಡೇಕಲ್ಲ ಬಸವಣ್ಣವರ ಕಿರಿಯ ಪುತ್ರನಾದ ರಾಚಪ್ಪಯ್ಯ ಕೃತಿಗಳಲ್ಲಿ ಒಂದಾದ 'ಸುವ್ವಿವಚನ' ಅರವತ್ತೆಂಟು ತ್ರಿಪದಿಗಳ ಕಾಲಜ್ಞಾನ ಕಾವ್ಯದಲ್ಲಿ ದಿಗ್ಗಿಯ ಸಂಗಮನಾಥನ ಐಕ್ಯಸ್ಥಳವಾದ ದೇವದುರ್ಗ (ಜಲದುರ್ಗ)ದಲ್ಲಿ ದೇವ ಸಿಂಹಾಸನ ರಚಿಸಿದರೆಂದು ತಿಳಿದುಬಂದಿದೆ.

ಹಗಿಯದ ಭತ್ತವ ಹುಗದವರು ಸತ್ತಾರೆ
ಸಗದ ಸಂಗಯ್ಯನ ಶರಣರಿಗೆ ಉಣಲುಂಟು
ಬಗೆಗೆಟ್ಟಿರ್ಯಾರೆ ಬರನೆಂದು[೧೬]

ಕನ್ನಡ ಭಾಷೆಯು ದೃಷ್ಟಿಯಿಂದ ಶರಣರದು ಬಹುದೊಡ್ಡ ಕೊಡುಗೆ. ಶ್ರೀ ಸಾಮಾನ್ಯರ ಭಾಷೆಯನ್ನು ಸಾಹಿತ್ಯ ಭಾಷೆಯನ್ನಾಗಿ ರೂಪಿಸಿಕೊಂಡ ಹನ್ನೆಡನೆಯ ಶತಮಾನದ ಶಿವಶರಣರಿಗಿಂತ

ಭಿನ್ನವಾಗಿ ಸಾಂಕೇತಿಕವೆನಿಸಿಕೊಳ್ಳುವಂತಹ ಅಮರಗನ್ನಡ ಲಿಪಿಯನ್ನು ಶೋಧಿಸಿದ್ದು ಅಮರಕಲ್ಯಾಣದ ಬಹುದೊಡ್ಡ ಕೊಡುಗೆ. ಈ ಭಾಷೆಯನ್ನು ಯಾತಕ್ಕಾಗಿ ಬಳಕೆಗೆ ತಂದರೆಂಬುದು ನಂತರದ ಪ್ರಶ್ನೆ. ಆದರೆ ಅಮರಗನ್ನಡ ಲಿಪಿಯ ಉಗಮಕ್ಕೆ ಕಾರಣರಾದ ಅಮರ ಕಲ್ಯಾಣದ ದಿಗ್ಗಿ ಸಂಗಮನಾಥ ಮತ್ತು ಅದನ್ನು ಬೆಳೆಸಿಕೊಂಡು ಹೋದ ಕಡೆಯ ಕಲ್ಯಾಣದ ಬಸವಣ್ಣ ಇವರಿಗೆ ಚಾರಿತ್ರಿಕ ಮಹತ್ವ ಸಲ್ಲುತ್ತದೆ. ಇಂತಹ ಅಮರಗನ್ನಡ ಲಿಪಿಯನ್ನು ಸಂಗಮನಾಥ ಕೊಡೇಕಲ್ ಬಸವಣ್ಣನಿಗೆ ತಿಳಿಸಿಕೊಟ್ಟನೆಂಬ ಸಂಗತಿ ಆತನ ವಚನವಾಕ್ಯದ ಈ ಪದ್ಯದಿಂದ ತಿಳಿದುಬರುತ್ತದೆ.

ಹನ್ನೊಂದ ಅಮರಗನ್ನಡದ ಲಿಪಿ
ಉನ್ನತುತ್ತರ ಉದಯ ಕಾಲದಿ
ನಮ್ಮನರಿತವರಿಲ್ಲಯ್ಯ ಬಸವ ಕೇಳೆಂದ[೧೭]

ದಿಗ್ಗಿ ಸಂಗಮನಾಥನು ಕೊಡೇಕಲ್ ಬಸವಣ್ಣನವರಿಗೆ ತಾವು ಜನಿಸಿಬಂದ ಕಾರಣವನ್ನು ತಿಳಿಸಿ, ಆತನಿಗೆ ದೀಕ್ಷೆಯನ್ನು ನೀಡಿ ಮಾರ್ಗದರ್ಶನ ತೋರಿ ಆತನನ್ನು ಸಮಾಜ ಸುಧಾರಕನನ್ನಾಗಿ ರೂಪಿಸಿದ ಸಂಗತಿಯನ್ನು ಕೊಡೇಕಲ್‌ನ ವಚನವಾಕ್ಯಗಳು ಪ್ರತಿಪಾದಿಸುತ್ತವೆ.

ನಂಬು ನಂಬಿಗೆ ಸುಷುಪ್ತಿ ಜಾಗ್ರದಿ
ಬಿಂಬ ತಪಸಿಗೆ ಈಡು ಆದರೆ
ಕೊಂಬು ಕೊಡುವಡೆ ನೋಡ್ಯನಂತಃಕರಣದಲಿ
ನಂಬಿದಾಗಲೆ ನಿಜವು ಕಾಂಬುದು
ತಂದೆ ಸಂಗನ ಕೃಪೆಯು ಇರುತಿರೆ
ಕೊಂಬರೇನಿಂದು ಕಾರ್ಯವು ಬಸವ ಕೇಳೆಂದ[೧೮]

ವಾಲೆ ಸುಮ್ಮನೆ ಬಂದುದಿಲ್ಲ
ಮಾಲೆಯ ಮಾತುಗಳು ಅಲ್ಲ
ಕೀಲ ತೋರಿದ ಸಂಗ ಬಲ್ಲ
ತಾಲೂಕು ಬರಕೊಂಡು ಇರು ಎಂದೆನಲ್ಲಾ[೧೯]

ಇಷ್ಟು ಅರಿತು ನಡೆದರೆ ಸಾಧ್ಯ
ಅಷ್ಟರಿಂದಲಿ ಸಕಲ ಸಾಧ್ಯ
ಅಷ್ಟಮ ಸಿದ್ಧಿಗಳು ಸಾಧ್ಯ
ದೃಷ್ಟ ಪ್ರತ್ಯಕ್ಷ ಸಂಗಮನಾಥ ಸಾಧ್ಯ[೨೦]

೧೨ನೇ ಶತಮಾನದ ಶಿವಶರಣರ ವೈಚಾರಿಕ ಚಳುವಳಿಯನ್ನು ಧಾರ್ಮಿಕ ಚಳುವಳಿಯನ್ನಾಗಿ ರೂಪಿಸುವ ಯತ್ನಗಳು ಪ್ರಾಯಶಃ ೧೮, ೧೯ನೇ ಶತಮಾನದಲ್ಲಿ ನಡೆದಂತೆ ತೋರುತ್ತದೆ. ವೀರಶೈವ, ಶೈವ, ಶೈವಾಗಮ, ಹೀಗೆ ಬೇರೆ ಬೇರೆ ಹೆಸರುಗಳಿಂದ ಶರಣರ ಪ್ರಜಾಪ್ರಭುತ್ವದ ಆಶಯಗಳು ಪುರೋಹಿತ, ಮಠಕೇಂದ್ರಿತ, ಸಂವಿಧಾನಗಳಾಗಿ ಪರಿವರ್ತನೆಗೊಂಡಂತೆ ತೋರುತ್ತದೆ. ಅಂತಹ ಸಂದರ್ಭದಲ್ಲಿ ಶೈವ ಯಾವುದು, ಶೈವಾಗಮ ಯಾವುದು ಎಂಬ ಚರ್ಚೆಯೇ ನಿರರ್ಥಕ ಎಂಬಂತೆ ಅಮರಕಲ್ಯಾಣದ ಸಂಗಮನಾಥ ಪ್ರತಿಪಾದಿಸಿರುವುದು ಶರಣಪರಂಪರೆಯ ಐತಿಹಾಸಿಕ ಮುಂದುವರಿಕೆಯೆನಿಸಿದೆ.

ನಾಭಿಯಲ್ಲಿ ಶೈವಾಗಮವು
ನಡುವಿನದೆ ಶುದ್ಧ ಶೈವಗಳು
ಶಿಖಾಮಣಿ ವೀರಶೈವಗಳು
ಮತ್ತು ಪ್ರಕಾಶ ಸಂಗಮನಾಥ ನಿತ್ಯಕೃತ್ಯಗಳು[೨೧]

ಡಿಳ್ಳಿಯೆಂಬುದಕ್ಕೆ ಪ್ರತಿ ಹೆಸರು
ಕಲ್ಯಾಣಕೆ ಪ್ರತಿ ಹೆಸರು
ಎಲ್ಲಾ ಸ್ಥಾನಕೆ ಹೊಸ ಹೆಸರು
ನೆನೆವ ಸ್ಥಾನವು ಭೂ ಸ್ವರ್ಗ ಪೆಸರು[೨೨]

ಮುಂದುವರಿದು ಶರಣ ಸಿದ್ಧಾಂತಗಳಾದ ಗುರು-ಲಿಂಗ-ಜಂಗಮದಂತಹ ತಾತ್ವಿಕ ಸಂಗತಿಗಳನ್ನು, ಪರಶಿವನ ನಿರಾಕಾರ ಸ್ವರೂಪವನ್ನು ಕೊಡೇಕಲ್ ಬಸವಣ್ಣನವರಿಗೆ ಅರುಹಿದ ಸಂಗಮನಾಥನ ಮಹಿಮೆಯನ್ನು ಕೊಡೇಕಲ್ ವಚನವಾಕ್ಯ ಸಾಹಿತ್ಯ ಕಟ್ಟಿಕೊಡುತ್ತದೆ.

ಮರೆಮಾಡಿ ಬಂದಾನೆ ಲಿಂಗ ತನ್ನ
ಕುರುಹು ತೋರಿ ತೊರದಾನೆ ಸಂಗ
ಹೆಪ್ಪಾಗಿ ತಾ ನಿಂತ ಮತ್ತೆ ಈ ತನುತ್ರಯಕ್ಕೆ
ಇಪ್ಪ ನೆಲೆಯನು ತೋರೆದಾರಿಗೆ ತಾನ್ಯಾಕೆ
ಬಪ್ಪವಳಿಯದಲಿಂತು ತಾನಾಗಿ ನಿಲ್ಲಲಿಕೆ
ಕಪ್ಪು ಕಣ್ಣೊಳಗೆ ಇದ್ದಂತೆ ಅಪ್ಪ ಸಂಗಯ್ಯನ ಕೃಪೆ ಈ ತೆರೆನಂತೆ[೨೩]

ಗುರುಬಸವಣ್ಣನು ಚನ್ನಬಸವೇಶ್ವರನು
ಕರುಣ ಕೃಪೆಯನಿಟ್ಟ ಪ್ರಭುವು ಗುಹೇಶ್ವರನು
ಭರವಸವು ಬಂದರೆ ಮೇಲು ಸಂಗಮನಾಥ
ಅರುಹಿದನು ತನ್ನ ಲೆಂಕನಿಗೆ ಈ ವರವು
ತೋರಿ ಬಂತು ಮರ್ತ್ಯಕೆ ನೋಡುಮುಂತು[೨೪]

ಸಂಗಮನಾಥನು ನಿರಾಕಾರ ಸ್ವರೂಪಿ ನಿಃಕಾಯದವನು. ಕೊಡೇಕಲ್ಲ ಬಸವಣ್ಣನವರಿಗೆ ಪ್ರತ್ಯಕ್ಷನಾಗಿ ತನ್ನ ಕುರುಹುಗಳನ್ನು ತೋರಿಸಿದ್ದಾನೆ. ಅಷ್ಟೇ ಅಲ್ಲದೆ ತನುವಿಗೆ ಆಸರೆಯಾಗಿ ನೆಲೆಯನು ತೋರಿಸಿದ ಕಾಮಧೇನು ಕಲ್ಪವೃಕ್ಷ ಇವರಾಗಿದ್ದಾರೆ.

ಕೊಡೇಕಲ್ಲ ಪರಂಪರೆಯಲ್ಲಿ ಬರುವ ವೀರಸಂಗಪ್ಪಯ್ಯ ದಿಗ್ಗಿ ಸಂಗಮನಾಥನ ಶಿಷ್ಯ ಪ್ರಶಿಷ್ಯರಲ್ಲಿ ಒಬ್ಬನಾಗಿದ್ದಾನೆ. ಈತನಿಂದ ರಚಿತವಾದ ನಂದಿಯಾಗಮಲೀಲೆ, ಸ್ವರವಚನ, ಕಾಲಜ್ಞಾನದ ಕಟ್ಟಳೆ ಕೃತಿಗಳಲ್ಲಿ ದಿಗ್ಗಿ ಸಂಗಮನಾಥನನ್ನು ಕುರಿತ ಉಲ್ಲೇಖಗಳಿವೆ.

"ಬಿಟ್ಟಮಂಡಿಯ ಮೇಲೆ ಕಿರುಜೆಡೆ
ಸುಟ್ಟು ಉರಿವ ನಯನ ನೊಸಲಲಿ
ಮೆಟ್ಟಿದ ಹಾವುಗೆಯು ಪಾದದಿ ಕಮಲಲೋಚನವು
ಮುಟ್ಟಿ ಹಸ್ತದಿ ನಾಗದಂಡವು
ಕಟ್ಟಿದ ಕಟಿಸೂತ್ರ ಕೃಪವು
ಇಟ್ಟ ಸರ್ವಾಂಗದಲಿ ಭಸಿತನಾರೂಢ ರೂಪಿನಲಿ"[೨೬]

ಕೊಡೇಕಲ್ಲ ಪರಂಪರೆಯ ಮುಖ್ಯ ರೂವಾರಿಯಾದ, ಗುರುವಾದ ಅರೂಢಸಂಗಮನಾಥನ ವ್ಯಕ್ತಿ ಚಿತ್ರವನ್ನು ಕಟ್ಟಿಕೊಟ್ಟಿದೆ. ಭಯಂಕರರೂಪಿಯಾಗಿ, ಆರೂಢನಾಗಿ ಸಂಗಮನಾಥನು ಕಂಡುಬರುತ್ತಾನೆ.

ಬಂದು ಬಸವನು ಪಾದಕೆರಗುತ
ಅಂದು ಕಲ್ಯಾಣದ ಲಿಪಿಯ ಕಳುಹಿದೆ
ಇಂದು ಏಕಾದಶಿಯ ಲಿಪಿಯ ಪತ್ರವನಿತ್ತು
ತಂದೆ ಸಂಗನು ಮಾತ್ರ ಕೂನವ
ಹಿಂದು ಮುಂದಣ ಅರುಹು ತೋರಿದ
ನಿಂದು ಮನದ ಬೆಳಗು ಹರಿದು ತಮವು ಪರಿದೊಡೆ"[೨೭]

ಶಿಷ್ಯನನ್ನಾಗಿ ಸ್ವೀಕರಿಸಿದ ಕೊಡೇಕಲ್ಲ ಬಸವನಿಗೆ ಹನ್ನೊಂದು ಬಗೆಯ ಅಮರಗನ್ನಡ ಲಿಪಿಯನ್ನು ನೀಡಿರುವುದಲ್ಲದೆ ಕಲ್ಯಾಣ ಬಸವನಿಗೂ ಲಿಪಿಜ್ಞಾನವನ್ನು ಹೇಳಿದ ಸಂಗಮನಾಥ ಎಂದು ಅಭೇದದಲ್ಲಿ ವರ್ಣಿಸಲಾಗಿದೆ.

ಹಸ್ತಮಸ್ತಕ ಮಾಡಿ ಬಸವಣೆ
ಇತ್ತ ಮಾಯದ ತೇಜಿ ನಾಲ್ಬರ
ಭೃತ್ಯರು ಅದೃಶ್ಯರೂಪಿನ ಸೇವಕರನಾಗ

ಮತ್ತೆ ನುಡಿಯ ಪರುಷವಿತ್ತನು
ಎತ್ತಿ ತೊಡಿಸಿದ ಚರ್ಮದಾಂಬರ ಸಂಗನುವಿಜಯ ಮಾಡಿದನು[೨೮]

ಆರೂಢ ಸಂಗಮನಾಥನು ಕೊಡೇಕಲ್ ಬಸವಣ್ಣನಿಗೆ 'ಹಸ್ತಮಸ್ತಕ' ದೀಕ್ಷೆ ಮಾಡುವ ಮೂಲಕ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ. ಆಮೇಲೆ ಶಿಷ್ಯನಿಗೆ ಮಾಯದ ಕುದುರೆ, ನಾಲ್ವರು ಸೇವಕರಾದ ಘಟ್ಟಯ್ಯ, ಬೆಟ್ಟಯ್ಯ, ಗಡಚಣ್ಣ, ಮಿಡಚಣ್ಣರನ್ನು ಒಪ್ಪಿಸುತ್ತಾನೆ. ಅಂದದ್ದು ಆಗುವ ನುಡಿ ಸಿದ್ಧಿಯನ್ನು ನೀಡಿ ಮೈಮೇಲೆ ಆರೂಢ ವೇಷವಾದ ಚರ್ಮಾಂಬರವನ್ನು ತೊಡಿಸುತ್ತಾನೆ.

ನಂದಿಯಾಗಮಲೀಲೆ ಕೃತಿಯ ೧೪ ಮತ್ತು ೧೫ ಸಂಧಿ ದಿಗ್ಗಿ ಸಂಗಮನಾಥನ ವ್ಯಕ್ತಿತ್ವವನ್ನು ಚಿತ್ರಿಸಲು ಮೀಸಲಾಗಿದೆ. ಈತ ಕೊಡೇಕಲ್ ಬಸವಣ್ಣನ ಗುರುವಾಗಿ ಆತನನ್ನು ಕಲ್ಯಾಣ ಪರಂಪರೆಯ ಪ್ರಚಾರಕನಂತೆ ಸಿದ್ಧಿಗೊಳಿಸಿದ ಪರಿಯನ್ನು ಕಾವ್ಯದಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ.

ಇತ್ತ ಬಸವನ ಮನದ ಒಳಗಣ
ಕತ್ತಲೆಯು ಹರಿದು ಪ್ರಜ್ವಲಿಸಿ
ಎತ್ತಣ ಉದ್ಯಮವು ವ್ಯವಹಾರ ಧನದ ಲಂಪಟವು
ಕರ್ತೃ ಸಂಗನು ಇತ್ತ ಓಲೆಯ
ವೃತ್ತಾಂತವನು ಓದಿಕೊಳುತಲಿ
ಮರ್ತ್ಯದೊಳಗಣ ಕೂಟ ಮಾಟದಿ ವ್ಯರ್ಥಜನ್ಮಗಳು[೨೯]

ಈ ಪರಿ ಉದ್ಯಮವ ಮಾಡುತ
ವ್ಯಾಪಾರಗಳ ನಡೆಸುತಿರಲು
ರೂಪ ತಪ್ಪಿಸಿ ಬಂದು ನಿಂತನು ಸಂಗಮೇಶ್ವರನು
ದೀಪ ಬೆಳಗಿಗೆ ತಮವು ಪರಿದೊಲು
ಈ ಪರಿಯಲಿ ಕಾಣಗೊಡದೆ
ತಪ್ಪಿಸಿದನು ಮನದ ಬೆಳಗಿನ ಅರುಹ ಮರೆಮಾಡಿ[೩೦]

ಆಣೆಕಾರನು ಸಂಗಮೇಶ್ವರ
ಪ್ರಾಣಲಿಂಗಸ್ಥಲವ ತಂದನು
ಮಾಣದೆ ಹೇಳಿದನು ತೀರ್ಥ ಪ್ರಸಾದ ಮಹಿಮೆಯನು
ಕ್ಷೋಣಿಯೊಳಗೆ ಅನ್ನ ಉದಕವ
ತ್ರಾಣ ಜೀವನಾಧಾರ ಎಂಬಂತೆ
ಜೋಳ ಮದಳಿಗಿಕ್ಕಿದಂತೆ ಶರೀರ ಒಲ್ಮೆಯದು[೩೧]

ಆರೂಢ ಪಂಥದವನಾದ ಸಂಗಮೇಶ್ವರನು ಕೊಡೇಕಲ್ಲ ಬಸವಣ್ಣನಿಗೆ ಆರೂಢ ಪಂಥದ ತಾತ್ವಿಕ ವಲಯಕ್ಕೆ ಎತ್ತಿಕೊಂಡವನು ಆರೂಢ ಸಂಗಮೇಶ್ವರನಾಗಿದ್ದಾನೆ.

ನೀನೆ ಜಗಕೆ ಕರ್ತುನಾದರೆ
ದಾನಿ ಸಂಗನನುಡಿಸಿ ಕೊಡುವುದು
ಅನುಮಾನಿಲ್ಲದೆ ಮರವೆ ತೆರೆಯನು ಹರಿದು ತೋರುವದು
ಮಾನನಿಧಿಯು ಬಸವರಾಜನು
ತಾನು ಭೂಧರ ಶಿಲೆಯ ಗವಿಯೊಳು
ಆನಂದದಿಂದಲಿ ಹೋಗಿ ಕಂಡನು ಆ ಪರಂಜ್ಯೋತಿಯನು[೨೨]

ಈ ಪರಿಯಲಿ ಸ್ತುತಿಯ ಮಾಡುತ
ಆ ಪರಂಜ್ಯೋತಿ ದಿಗ್ವಿಗವಿಯೊಳು
ಭಾಪು ಸಂಗನು ಮಾತನಾಡದೆ ನುಡಿದ ನರ್ತಿಯಲಿ
ಭೂ ಪ್ರದಕ್ಷಿಣ ಮಾಡಹೇಳಿದೆ
ಆ ಪರಬ್ರಹ್ಮನ ನುಡಿಯ ಸಾರೆಂದು
ರೂಪುದೋರಿದೆ ಚರ್ಮಾಂಬರ ಕಂಸಿರಾಕ್ಷಿಗಳು[೨೩]

ಅದೇ ರೀತಿ ವೀರ ಸಂಗಪ್ಪಯ್ಯನ ಸ್ವರವಚನಗಳು ಸಹ ಈತನ ಆರೂಢತ್ವದ ಮಹತ್ವವನ್ನು ವರ್ಣಿಸುತ್ತದೆ.

ಸಂಗಮಂ ಪಾಹಿ ಸಜ್ಜನರ ಹೃದಯ
ಲಿಂಗಮಂ ಪಾಹಿ ಅಂಗಲಿಂಗನು ಆತ್ಮಜೀವನು
ಸಂಗ ಸಂಯೋಗದಲಿ ರಕ್ಷಿಪ
ಆರು ದರುಶನ ಹೊಂದಿದ ಆರೂಢನೆ
ಮೇದಿನಿಗಾಶ್ರಯ ಶಿವನೆ
ಮಾರಹರನು ಮರ್ತ್ಯದೊಳಗಣ
ವೀರಶೈವದ ಭಕ್ತಿ ರಕ್ಷಿಪ[೨೪]

ಬಸಿತಾಂಗ ರುಂಡಮಾಲಿ ಭಾನುತೇಜ
ಯಶವ ಕೈಲಾಸದೀಶಾ
ಅಸಮ ಅಕ್ಷನು ಆದಿದೈವಕೆ

ಶಿಶುವು ಶರಣರ ಶೀಲ ರಕ್ಷಿಪ
ಪರಿವರಿ ಶಾಸ್ತ್ರಗಳು ನಿಮ್ಮಯ
ಚರಣವ ಸ್ತುತಿಸುತಿರೆ
ಅರಸು ಕೊಡೆಯಕಲ್ಲ ಬಸವನ
ಗುರುವು ಕಪ್ಪಡಿ ಗವಿಯ ವಾಸನೆ[೩೪]

ಇತ್ತೀಚೆಗೆ ದೊರೆತ ಗುಂಡಬಸವೇಶ್ವರ ಚರಿತ್ರೆ ಸಂಗಮನಾಥನ ವ್ಯಕ್ತಿತ್ವವನ್ನು ಮತ್ತು ಆತ ಸಂಚರಿಸಿದ ಸ್ಥಳಗಳನ್ನು ಚಾರಿತ್ರಿಕವಾಗಿ ಕಟ್ಟಿಕೊಡುತ್ತದೆ. ಈ ಕೃತಿಯ ಪ್ರಕಾರ ಸಂಗಮನಾಥನ ಶಿಷ್ಯ ಪರಂಪರೆಯನ್ನು ಮತ್ತು ಆತನ ಡಂಗುರ ಬೋಧೆಯ ಕಾಯಕವನ್ನು ಈ ಕೆಳಗಿನ ಪದ್ಯಗಳು ಹೀಗೆ ನಿರೂಪಿಸುತ್ತವೆ.[೩೬]

ಗುರುಗುಂಡ ಬಸವೇಶ ನೆರೆಲಿಂಗ ಸಂಗಮ
ಚರವು ಎನಗೆ ಪ್ರಭುದೇವ
ಗುರು ಹೃದಾಲಯದೊಳು ಚರಲಿಂಗವಿಹುದೆಂದು
ನೆರೆನಂಬಿ ನಾ ಭರಿಸುವೆನು
ಬಾಳಲೋಚನದಲ್ಲಿ ಕಳುಹಿಸಿಕೊಂಡರು
ಢಾಳರು ಗೋಮುಖದವರು
ಇಳೆಯೊಳು ಹಳೆಯಸಗರವೆಂಬ ಊರಲ್ಲಿ
ಬೆಳಗುಳ್ಳ ಗುರು ಜನಿಸಿದನು
ಕೇಳು ನೀ ಬಸವಣ್ಣ ಹೇಳುವ ಮಾತನು
ಭಾಳಲೋಚನ ಭಕ್ತನೊಬ್ಬ
ಹಳೆಯ ಸಗರದ ಹೊರಗೆ ಮಠಕಟ್ಟಿ ತಾ
ಇಳೆಯೊಳಮರಕಲ್ಯಾಣೆನಿಸಿ[೩೮]

ತಿಥಿನಾಲ್ಕು ಮಾಡಿದ ಆತ ತಾ ಬಸವಣ್ಣ
ಮತ್ತೆ ಭಕ್ತರು ಬೋಳರೆನಿಸಿ
ಶೃತಿಧರ್ಮ ಬೋಧೆಯ ಸಾರಿಸುತಲಿಹನು
ಮಥಿಸಿ ಮರ್ತ್ಯಲೋಕದೊಳಗೆ[೩೯]

ಅಂದಮಾತನು ಕೇಳಿ ಎಂದೆಂಬ ಬಸವಣ್ಣ
ಮುಂದೆ ಭಕ್ತರು ಬೋಳರೆನಿಸಿ

ಕುಂದದೆ ನಾಲ್ಕು ತಿಥಿಯನು ಮಾಡುವೆ ನಾನು
ಎಂದಾಡುವನು ತಾನಾಡುತಲಿ[೮೦]

ಡಂಗುರ ಬೋಧೆಯ ಹಿಂಗದೆ ಹೇಳ್ವೆನು
ಅಂಗವಿಸಲು ಬಾರದಂತೆ
ಸಂಗಮೇಶ್ವರನ ಮೆಚ್ಚಿನ ನುಡಿನುಡಿದೆನಂ
ದಂಗವಣೆಗಳ ನಾಡುವನು[೮೧]

ಕೊಡೇಕಲ್ ಬಸವಣ್ಣನ ಸಮಕಾಲೀನನಾದ ಮಂಟೇಸ್ವಾಮಿ ದಕ್ಷಿಣ ಕರ್ನಾಟಕದಲ್ಲಿ ಶರಣ ಪರಂಪರೆಯನ್ನು ಬಿತ್ತಿದವನು. ಈತನ ಸಾಹಿತ್ಯದಲ್ಲಿಯೂ ಕೂಡಾ ದಿಗ್ಗಿ ಸಂಗಮನಾಥನ ಕುರಿತು ಉಲ್ಲೇಖಗಳಿವೆ.

"ಕೊಡೇಕಲ್ ಬಸವಣ್ಣನ ಶಿಷ್ಯನಾದ ಮಂಟೇಸ್ವಾಮಿಯ ಕಾಲಜ್ಞಾನ ಎಂಟು ತ್ರಿಪದಿಗಳಿಂದ ಕೂಡಿದೆ. ಈ ಕಾಲಜ್ಞಾನದ ಪಲ್ಲವಿಯಲ್ಲಿ "ಬಣ್ಣ ನಡೆಯದು ಕೇಳಿರೋ ಬಾಹ್ಯದ ಬಣ್ಣ ನಡೆಯದು" ಪ್ರಸ್ತುತ ಕಾಲಜ್ಞಾನ ಕೃತಿಯ ಕೊನೆಗೆ "ಸಂಗಮೇಶ್ವರ ಕುಮಾರ ಮಂಟೇದಲಿಂಗ ಸಾರಿದ ಡಂಗುರ" ಎಂಬ ಸಾಲು ಬರುತ್ತದೆ. ಸಂಗಮೇಶ್ವರ ಕುಮಾರ ಎಂದು ಮಂಟೇದಲಿಂಗನು ಕರೆದುಕೊಳ್ಳುತ್ತಿರುವುದು ಆಶ್ಚರ್ಯಕರವಾಗಿದೆ. ಇಲ್ಲಿ ಉಕ್ತನಾದ 'ಸಂಗಮೇಶ್ವರ' ಕೊಡೇಕಲ್ಲ ಬಸವನ ಗುರು ಆರೂಢ ಸಂಗಮೇಶ್ವರನಲ್ಲದೆ ಬೇರೆಯಲ್ಲ. ಇದನ್ನು ನೋಡಿದರೆ ಪರಮಗುರುವನ್ನು ತನ್ನ ಕಾಲಜ್ಞಾನದಲ್ಲಿ ಅಂಕಿತವೆಂಬಂತೆ ಬಳಸಿದ್ದಾನೆ ಎಂದು ಭಾವಿಸಬೇಕಾಗುತ್ತದೆ.

ಬಾಹ್ಯದ ಆಡಂಬರ (ಬಾಹ್ಯದ ಬಣ್ಣ) ನಡೆಯದು ಇನ್ನು ಮುಂದೆ ಈ ಆಡಂಬರ ಮುರಿಯಲು ಬಸವಣ್ಣನಾಟ, ಚೆನ್ನಬಸವಣ್ಣನಾಟ ಬರುತ್ತಿದೆ. ಪುಂಡಲಿಂಡರು ಹೆಚ್ಚಾಗಿದ್ದಾರೆ. ಮಂಡಲದಲ್ಲಿ ಗಂಡನ ಜೀವಕ್ಕೆ ಮದ್ದು ಅರೆಯುವ ಹೆಂಡತಿ ಹುಟ್ಟಿ ಉಂಡ ಮನೆಗೆ ಎರಡು ಬಗೆಯಲು ಮುಂದಾಗಿದ್ದಾಳೆ. ಪಾಪ-ಪುಣ್ಯದ ವಿವೇಕವಿಲ್ಲದೆ ಗಂಡು ಹೆಣ್ಣು ಹೆಚ್ಚಾಗಿದ್ದಾರೆ. ಭೂಮಿಯಲ್ಲಿ ಅಣ್ಣನ ಹೆಂಡತಿಗೆ ಮೈದುನ ಕಣ್ಣು ಹಾಕುತ್ತಿದ್ದಾನೆ. ನಡತೆ ಎನ್ನುವುದು ಮಣ್ಣುಗೂಡಿ ಹೋಯಿತು. ಮರ್ತ್ಯದಲ್ಲಿ ಸತ್ಯವನ್ನು ಸಾರುತ್ತ ಹೊರಟಿದ್ದಾನೆ ಕರ್ತ. ಹೆತ್ತ ತಾಯಿಯ ಜರಿದವನನ್ನು ಕರ್ತ ಸಂಗಮನಾಥ ನೋಡಿಕೊಳ್ಳುತ್ತಾನೆ.[೭೨]

ಕವಿ ಮಂಟೇಸ್ವಾಮಿ ಮುಂದೆ ಬರಲಿರುವ ಅಪಾಯದ ಸೂಚನೆಯನ್ನು ತಿಳಿಸುತ್ತಾನೆ.

ಹೀಗೆ ದಿಗ್ಗಿ ಸಂಗಮನಾಥನ ಚಾರಿತ್ರಿಕ ಸಂಗತಿಗಳನ್ನು ಕುರಿತು ಈ ಮೇಲೆ ಪ್ರಸ್ತಾಪಿಸಿದ ಕೃತಿಗಳು ತಿಳಿಸುತ್ತದೆ. ಇವುಗಳನ್ನು ಅಧ್ಯಯನಕ್ಕೊಳಪಡಿಸುವುದರ ಮೂಲಕ ದಿಗ್ಗಿ ಸಂಗಮನಾಥನ ಹುಟ್ಟು,

ಬೆಳವಣಿಗೆ, ಗುರುಪರಂಪರೆ, ಶಿಷ್ಯ-ಪ್ರಶಿಷ್ಯ ಪರಂಪರೆ ಹಾಗೂ ಸಂಚರಿಸಿದ ಭೂ ಪ್ರದೇಶ ಹಾಗೂ ಕೊನೆಯ ದಿನಗಳನ್ನು ಚಾರಿತ್ರಿಕವಾಗಿ ಕಟ್ಟಿಕೊಡಲು ಸಾಧ್ಯವಾಗುತ್ತದೆ.

**ಕೊನೆಯ ಟಿಪ್ಪಣಿಗಳು**

೧. ವಚನ ಸ್ವರವಚನ-ಸಂ. ಡಾ.ಶಿವಾನಂದ ವಿರಕ್ತಮಠ, ಪುಟ ೧೬೧

೨. ಅದೇ ಪುಟ ೬೭

೩. ಅದೇ ಪುಟ ೯೮

೪. ಅದೇ ಪುಟ ೭೨

೫. ಅದೇ ಪುಟ ೭೪

೬. ಅದೇ ಪುಟ ೧೦೮

೭. ಅದೇ ಪುಟ ೧೧೯

೮. ಅದೇ ಪುಟ ೧೨೬

೯. ಅದೇ ಪುಟ ೧೩೪

೧೦. ಅದೇ ಪುಟ ೧೫೦

೧೧. ಅದೇ ಪುಟ ೧೮೮

೧೨. ಅದೇ ಪುಟ ೨೩೦

೧೩. ಅದೇ ಪುಟ ೨೩೦

೧೪. ಅದೇ ಪುಟ ೪೧೯

೧೫. ರಾಚಪ್ಪಯ್ಯನ ಕೃತಿಗಳು- ಸಂ. ಡಾ.ಶಿವಾನಂದ ವಿರಕ್ತಮಠ, ಪುಟ ೪೦೩

೧೬. ಅದೇ ಪುಟ ೪೦೬

೧೭. ಕೊಡೇಕಲ್ಲ ವಚನವಾಕ್ಯ- ಸಂ. ಡಾ.ಬಸವಲಿಂಗ ಸೊಪ್ಪಿಮಠ, ಪುಟ ೪೬೫

೧೮. ಅದೇ ಪುಟ ೪೮೯

೧೯. ಅದೇ ಪುಟ ೫೧೨

೨೦. ಅದೇ ಪುಟ ೫೧೨

೨೧. ಅದೇ ಪುಟ ೫೧೩

೨೨. ಅದೇ ಪುಟ ೫೧೩

೨೩. ಅದೇ ಪುಟ ೧೭

೨೪. ಅದೇ ಪುಟ ೨೧

೨೫. ನಂದಿಯಾಗಮಲೀಲೆ- ಸಂ. ಆಯ್.ಜಿ.ಕೊಡೇಕಲ್ ಮಠ ಪುಟ ೪

೨೬. ಅದೇ ಪುಟ ೧೭೮

೨೭. ಅದೇ ಪುಟ ೧೭೯

೨೮. ಅದೇ ಪುಟ ೧೭೯

೨೯. ಅದೇ ಪುಟ ೧೨೯

೩೦. ಅದೇ ಪುಟ ೧೭೭

೩೧. ಅದೇ ಪುಟ ೨೨೩

೩೨. ಅದೇ ಪುಟ ೨೨೩

೩೩. ಅದೇ ಪುಟ ೨೨೪

೩೪. ಅದೇ ಪುಟ ೨೭೨

೩೫. ಅದೇ ಪುಟ ೨೭೨

೩೬. ಗುಂಡಬಸವೇಶ್ವರ ಚರಿತ್ರೆ- ಸಂ. ಡಾ. ಎಂ.ಎಂ.ಕಲಬುರ್ಗಿ ಸಂಗಪ್ಪಯ್ಯ ಸ್ವಾಮಿ ಪುಟ ೯, ೨೭, ೫೭, ೫೮

೩೭. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ- ಡಾ. ಬಸವಲಿಂಗ ಸೊಪ್ಪಿಮಠ, ಪುಟ ೨೩೪

# ಅಧ್ಯಾಯ ೫

# ಕಲ್ಯಾಣ ಪರಂಪರೆ ಮತ್ತು ದಿಗ್ಗಿ ಸಂಗಮನಾಥ

## ಅಧ್ಯಾಯ ೫

# ಕಲ್ಯಾಣ ಪರಂಪರೆ ಮತ್ತು ದಿಗ್ಗಿ ಸಂಗಮನಾಥ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪರಂಪರೆಯ ಪ್ರಜ್ಞೆಯನ್ನು ಜೀವಂತವಾಗಿ ಉಳಿಸಿಕೊಂಡು ಬಂದ ಕೀರ್ತಿ ವಚನ ಸಾಹಿತ್ಯಕ್ಕೆ ಸಲ್ಲುತ್ತದೆ. ಅಂದರೆ, ವಚನ ಸಾಹಿತ್ಯದ ಸಾಮೂಹಿಕ ಸೃಷ್ಟಿ, ವಚನ ಸಾಹಿತ್ಯದ ಸಾಮೂಹಿಕ ಸಂಕಲನ ಹಾಗೂ ವಚನ ಸಾಹಿತ್ಯದ ಸಾಮೂಹಿಕ ಸಂಪಾದನಾ ಹಿನ್ನೆಲೆಯಲ್ಲಿ ಈ ಪರಂಪರೆಯನ್ನು ಗುರುತಿಸಬಹುದು. ಇಂತಹ ಸಾಹಿತ್ಯ ಸೃಷ್ಟಿಗೆ ಕಾರಣೀಭೂತರಾದ ವಚನಕಾರರಲ್ಲಿಯೂ ಪಾರಂಪರಿಕ ಇತಿಹಾಸವನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ ಉರಿಲಿಂಗ ಪೆದ್ದಿ ಸಂಪ್ರದಾಯ, ನೂರೊಂದು ವಿರಕ್ತರ ಸಂಪ್ರದಾಯ, ತೋಂಟದ ಸಿದ್ಧಲಿಂಗ ಯತಿಗಳ ಸಂಪ್ರದಾಯಗಳಂತೆ, ಬಸವ ಸಂಪ್ರದಾಯ ಅಥವಾ ಪರಂಪರೆ ಇರುವುದು ಗಮನಿಸಬೇಕಾದ ಸಂಗತಿ. ವಿಶೇಷವಾಗಿ ಬಸವಣ್ಣನವರ ಆಶೋತ್ತರಗಳನ್ನು ತುಂಬಾ ವೈಚಾರಿಕವಾಗಿ ಆಚರಣೆಗೆ ತಂದ ದಿಗ್ಗಿ ಸಂಗಮನಾಥ, ಗುಂಡ ಬಸವೇಶ್ವರ, ಮಂಟೇಸ್ವಾಮಿ, ಕೊಡೇಕಲ್ ಬಸವಣ್ಣ, ರಾಚಪ್ಪಯ್ಯ, ವೀರಸಂಗಪ್ಪಯ್ಯ ಮುಂತಾದವರನ್ನು ಹೆಸರಿಸಬಹುದು. ಈ ಎಲ್ಲ ಮಹನೀಯರು ನೆಲೆನಿಂತ ಪ್ರದೇಶಗಳೇ ನಮ್ಮ ಕಾವ್ಯ ಪುರಾಣಗಳಲ್ಲಿ ಸಮಯಕಲ್ಯಾಣ, ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ, ಕಡೇಕಲ್ಯಾಣ ಎಂಬ ನಾಮದಿಂದ ಪ್ರಸಿದ್ಧಿ ಹೊಂದಿವೆ. ಈ ಎಲ್ಲ ಸ್ಥಳನಾಮಗಳ ಅಧ್ಯಯನ ಮತ್ತು ಅಲ್ಲಿ ಉತ್ಪಾದನೆಗೊಂಡ ಸಾಹಿತ್ಯದ ತಾತ್ವಿಕತೆಯ ಮೂಲವನ್ನು ಶೋಧಿಸುತ್ತಾ ಹೋದರೆ ಕಲ್ಯಾಣ ಪರಂಪರೆಯ ಸಮಗ್ರ ಚಿತ್ರಣ ಕಂಡು ಬರುತ್ತದೆ.

"ಕಲ್ಯಾಣ'ದ ಸ್ಮೃತಿ 'ಅಮರ ಕಲ್ಯಾಣ' ಕಟ್ಟುವಿಕೆಯ ಹಿನ್ನೆಲೆಯಲ್ಲಿರುವುದು ಕೇವಲ ನಾಮಸಾದೃಶ್ಯಕ್ಕೆ ಸೀಮಿತವಾಗಿರದೆ ಅದರ ಆಂತರಿಕವಾದ ತಾತ್ವಿಕ ಆಶಯ ಆಕೃತಿಗಳಲ್ಲೂ ಮುಂದುವರಿದಿರುವುದು ಸೂಕ್ಷ್ಮವಾದ ಒಳನೋಟ ಹಾಗೂ ವಿಶ್ಲೇಷಣೆಗಳಿಂದ ವೇದ್ಯವಾಗುತ್ತದೆ. ಈ ಉಭಯ ಕಲ್ಯಾಣಗಳ ಪ್ರಕ್ರಿಯಾತ್ಮಕ ಸಂಬಂಧವು ವ್ಯಕ್ತಿ ನೆಲೆಯಲ್ಲಿ ಅಲ್ಲಿನ ಬಸವ-ಅಲ್ಲಮ-ಚೆನ್ನಬಸವಣ್ಣಾದಿಗಳು ಅಮರ

ಕಲ್ಯಾಣದಲ್ಲಿ ಕೊಡೇಕಲ್ಲ ಬಸವಣ್ಣ ಮಂಟೇಸ್ವಾಮಿ ರಾಚಪ್ಪಾಜಿಗಳಾಗಿ ಪುನರ್‌ಸೃಷ್ಟಿಯಾಗುತ್ತಾರೆ. ಒಂದರ್ಥದಲ್ಲಿ ಹೊಸಕಾಲದ ಒತ್ತಡ ತುಡಿತಗಳಲ್ಲಿ ಹಳೆಯ ಕಲ್ಯಾಣವನ್ನು ಅವರ ಹೆಸರಿನಿಂದಲೇ ತಂದು ಬದುಕುವುದು ಮತ್ತು ಅದು ನಾಶವಾಗದ ಹಾಗೆ ಅಮರವಾಗಿಸುವುದೇ ಆಗಿದೆ. ಹೀಗಾಗಿ ಇವರ ವಚನಗಳು ಕೇವಲ ವಚನಗಳಲ್ಲಿ 'ನುಡಿ ಪುರುಷ'ನನ್ನು ಹೊಂದಿದ ಕಾರಣಿಕ ವಾಕ್ಯಗಳು, ನಿಂತ ನಿಜವನ್ನು ಹೇಳುವ ನಿತ್ಯ ಕೃತ್ಯಗಳು ಆಗಿವೆ. ಈ 'ವಚನ ವಾಕ್ಯ'ಗಳನ್ನು ನುಡಿಗಳಾಗಿ ಹೇಳುತ್ತಾ ಡಂಗುರದೊಂದಿಗೆ ಊರೂರು ಹೋಗಿ ಸಾರುವುದು 'ವಚನ'ಕ್ಕೆ ಪಾವಿತ್ರ್ಯವನ್ನು ತಂದುಕೊಟ್ಟು ಅದರ ಮೇಲೆ ನಂಬುಗೆಯನ್ನು ಸ್ಥಾಪಿಸುವುದು, ವಚನಾಶಯಗಳನ್ನು ಬದುಕಲು ಹೇಳುವುದು ರಸವೈದ್ಯ-ಶರೀರಶಾಸ್ತ್ರ-ಯೋಗಾದಿಗಳನ್ನು ರೂಢಿಸುವುದು ಮೊದಲಾದವು ಈ ಪರಂಪರೆಯ ವೈಶಿಷ್ಟ್ಯಗಳಾಗಿವೆ.

ಸಮುದಾಯ ಪ್ರಜ್ಞೆಯ ಜಾಗೃತಿ ಇಲ್ಲಿನ ಮುಖ್ಯ ನೆಲೆಯಾಗಿದೆ. ಪವಿತ್ರ-ಅಪವಿತ್ರಗಳೆಂಬ ತರತಮರಹಿತವಾಗಿರುವ ಜಾತ್ಯಾತೀತ ನಿಲುವನ್ನು ಜನರಲ್ಲಿ ಜೀವಂತವಾಗಿಡುವುದು ಪರಂಪರೆಯ ಆಶಯವಾಗಿ ವ್ಯಕ್ತವಾಗಿದೆ. ಬಸವಣ್ಣ-ಮಹಮ್ಮದ್, ಅಲ್ಲಾ-ಅಲ್ಲಮ ಎಂಬ ಅದ್ವಯ ಕಲ್ಪಿಸಿ ಕಾಲಜ್ಞಾನಗಳಲ್ಲಿ ಸರ್ವೇಸಾಮಾನ್ಯವಾಗಿದೆ. ಈ ಐಕ್ಯತೆಯ ನಿಲುವುಗಳು ಈ ಪರಂಪರೆಯ ಸಾಮಾಜಿಕ ಚಟುವಟಿಕೆಗಳಲ್ಲಿ ಇನ್ನು ವ್ಯಾಪಕವಾದ ಹರವನ್ನು ಪಡೆದುಕೊಂಡಿವೆ. ದೇಶೀಯವಾದ ವೈದ್ಯವನ್ನು ಹೊಂದಿ ಮನೋಸ್ವಾಸ್ಥ್ಯಗಳನ್ನೂ, ನರನಾಡಿ ದೌರ್ಬಲ್ಯಗಳನ್ನು ಗುಣಪಡಿಸಲು ನಿಸರ್ಗ ಬೆಟ್ಟ ಪ್ರದೇಶಗಳಲ್ಲಿ ಶುಶ್ರೂಷಾಲಯ ಕೇಂದ್ರದಂತೆ ಈ ಪರಂಪರೆಯವರು ಕಾರ್ಯ ನಿರ್ವಹಿಸಿದ್ದು ನಿಜಕ್ಕೂ ಅಚ್ಚರಿಯ ಸಂಗತಿಯಾಗಿದೆ. ಒಂದರ್ಥದಲ್ಲಿ ಅಮರ ಕಲ್ಯಾಣದ ಹೆಸರು ಸಾರ್ಥಕವಾಗಿದೆ.

೧೨ನೇ ಶತಮಾನದಲ್ಲಿ ಕಲ್ಯಾಣವು ಚಾಲುಕ್ಯರ ರಾಜಧಾನಿಯಾಗಿರುವುದರ ಜೊತೆಗೆ ಬಸವ ಚಳುವಳಿಯ ಕೇಂದ್ರವಾಗಿತ್ತು. ಬಸವಣ್ಣನವರಾದಿಯಾಗಿ ವಚನಕಾರರು ವಚನಗಳನ್ನು ರಚಿಸಿ ಜನರ ಮನಸ್ಸಿನಲ್ಲಿರುವ ಜಾತೀಯತೆ, ಮೂಢನಂಬಿಕೆ, ಅಜ್ಞಾನವನ್ನು ಹೋಗಲಾಡಿಸಿದರು. ಈ ಸಾಮೂಹಿಕ ಚಟುವಟಿಕೆಗಳಿಗೆ ಅಂದಿನ ಕಾಲದಲ್ಲಿ ವಿಪ್ಲವ ಉಂಟಾದರೂ ಕೂಡಾ ಕಾರ್ಯ ನಿಂತು ಹೋಗಲಿಲ್ಲ.

ಚದುರಿಹೋದ ಕಲ್ಯಾಣವು ಮತ್ತು ಚರಿತ್ರೆ ಇತಿಹಾಸದ ಜನಮನದ ಸ್ಮೃತಿಪಟಲದಲ್ಲಿ ಉಳಿದುಕೊಂಡು ಬಂದವು. "ಕಲ್ಯಾಣವು ಕೇವಲ ಒಂದು ಭೌತಿಕ ಸ್ಥಳವಾಗಿ ಪರಿಭಾವಿಸುವ ಕಲ್ಪನೆ ಮರೆಯಾಯಿತು. ವಚನಕಾರರ ಆಶೋತ್ತರಗಳ ಪ್ರತೀಕವಾದ ಸಾಂಸ್ಕೃತಿಕ ಹಾಗೂ ವೈಚಾರಿಕ ಆಕೃತಿಗಳ ಮೊತ್ತರೂಪದ ಅರ್ಥವಂತಿಕೆಯನ್ನು ಕಲ್ಯಾಣವು ಪಡೆದುಕೊಂಡಿತು. ಹೀಗಾಗಿ ಕಲ್ಯಾಣವೆಂದರೇನೆ ವಚನಗಳೂ ಮತ್ತು ವಚನಕಾರರು ಕಣ್ಮುಂದೆ ಬರುವಂತಾಯಿತು."[೧]

'ಕಲ್ಯಾಣ'ವು ಒಂದು ಪರಂಪರೆಯ ಅರ್ಥವನ್ನು ಪಡೆದುಕೊಂಡು ಮುಂದೆ ಭಕ್ತಿ ಹಾಗೂ ಅನುಭಾವಗಳಿಗೆ ಒಂದು ಶಕ್ತಿಯಾಯಿತು. ವಚನಯುಗದ ತರುವಾಯ ಕರ್ನಾಟಕದ ಸಾಂಸ್ಕೃತಿಕ ಬದುಕು ಸ್ಥಿತ್ಯಂತರದ ಸ್ಥಿತಿಯನ್ನು ತಲುಪಿತು. ಭಿನ್ನ ಭಿನ್ನ ಧರ್ಮ, ಭಾಷೆ, ಸಂಸ್ಕೃತಿಗಳ ತಿಕ್ಕಾಟ ಆರಂಭವಾಯಿತು.

"ಬಸವಾದಿ ಶರಣರ ಬದುಕು-ಬರಹಗಳನ್ನು ಸ್ವೀಕರಿಸುವ, ಕಥನ, ಕಾವ್ಯಗಳ, ರೂಪದಲ್ಲಿ ಇವರನ್ನು ಹಿಡಿದಿಡುವ ಕ್ರಿಯೆಯ ಹರಿಹರನಿಂದ ಪ್ರಾರಂಭವಾಗಿ ತನ್ನದೇ ಆದ ನೆಲೆಗಳನ್ನು ಕಂಡುಕೊಂಡಿದೆ. ಹರಿಹರ ಎದುರಿಸಿದ ಸಮಸ್ಯೆಗಳು, ಕಂಡುಕೊಂಡ ಪರಿಹಾರಗಳು, ಧರ್ಮ ನಂಬಿಕೆಗಳು, ಸಾಹಿತ್ಯ ಅಭಿವ್ಯಕ್ತಿಯಲ್ಲಿ ಕಂಡುಕೊಂಡ ದಾರಿಗಳು ಮುಂದಿನ ವೀರಶೈವ ಕವಿಗಳಿಗೆ ಪ್ರೇರಣೆ ಪ್ರಭಾವಗಳಾಗಿ ನಿಂತಿವೆ. ಹರಿಹರನ 'ಬಸವರಾಜದೇವ ರಗಳೆ' ಬಸವಣ್ಣನ ಭಾವುಕ ಭಕ್ತಿಯ ಸುಂದರ ಅಭಿವ್ಯಕ್ತಿಯಾಗಿದೆ."[೨]

ಹೀಗೆ ಶಿವಶರಣರ ವಚನ ಚಳುವಳಿ, ಜಾತಿವರ್ಗ, ಲಿಂಗಭೇದ ಸಮಾಜ ನಿರ್ಮಾಣದ ಆಶಯದಿಂದ ಹುಟ್ಟಿಕೊಂಡಿತು. ಈ ಚಿಂತನೆಗಳೇ ಮುಂದೆ ನಾಥಪಂಥರೂಪದಲ್ಲಿ, ಆರೂಢಪಂಥ ರೂಪದಲ್ಲಿ ಬೆಳವಣಿಗೆ ಹೊಂದಿತು. ಇದಕ್ಕೆ ಧಾರ್ಮಿಕ, ಸಾಮಾಜಿಕ ಮತ್ತು ಜನರ ಪರಿಭಾವನೆಯ ಕಾರಣಗಳಿರಬಹುದು. ಬಸವ ಪೂರ್ವದಲ್ಲಿ ಪ್ರಚಲಿತವಿದ್ದ ಲಾಕುಳ, ಮಹಾವ್ರತಿ, ಪಾಶುಪತ, ಶೈವ ಇವು ಶರಣ ಚಳುವಳಿಯ ಸಂದರ್ಭದಲ್ಲಿ ಉಚ್ಚಾಟನೆಗೊಂಡಿದ್ದರೂ ಆನಂತರದಲ್ಲಿ ಮತ್ತೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಂತೆ ತೋರುತ್ತದೆ. ಕರ್ನಾಟಕದ ಮಟ್ಟಿಗೆ ದ್ವಾರಸಮುದ್ರ, ಹಂಪಿ, ಗುಬ್ಬಿ, ಗುಮ್ಮಳಾಪುರ, ಶಿವಗಂಗೆ ಮುಂತಾದ ಕಡೆ ಈ ಪಂಥಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಯಶಸ್ವಿಯಾದವು. ಒಟ್ಟಿನಲ್ಲಿ ಆಂಧ್ರದ ಆರಾಧ್ಯ ಪರಂಪರೆ ಹಂಪಿಯನ್ನು ಪ್ರವೇಶಿಸುವುದರ ಮೂಲಕ ಅಲ್ಲಿಯ ವಚನ ಸಾಹಿತ್ಯವನ್ನು ವಚನಾಗಮ ಸಾಹಿತ್ಯವಾಗಿ ರೂಪಾಂತರಿಸಿತು. ಹೀಗೆ ಶೈವ ಪ್ರಭಾವಕ್ಕೆ ಒಳಗಾದ ವಚನ ಸಾಹಿತ್ಯವನ್ನು ಚಿತ್ರಿಸುವ ಅನೇಕ ಕೃತಿಗಳು ಹಂಪಿ ಪರಿಸರದಲ್ಲಿ ಸೃಷ್ಟಿಯಾದವು. ಉದಾಹರಣೆಗೆ ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಲಿಂಗಾಲೀಲಾ ವಿಳಾಸ ಚಾರಿತ್ರ್ಯ, ಏಕೋತ್ತರ ಶತಸ್ಥಲ, ವೀರಶೈವಾಮೃತ ಪುರಾಣ ಮುಂತಾದ ಕೃತಿಗಳಲ್ಲಿ ಈ ಅಂಶವನ್ನು ಕಾಣಬಹುದಾಗಿದೆ. ಉಡಿಯ ಲಿಂಗವ ಬಿಟ್ಟು ಗುಡಿಯ ಲಿಂಗವನ್ನಾರಾಧಿಸುವ ಪರಂಪರೆ ಮುಂದುವರೆಯಿತು. ಕೋಟಿಶಂಕರಲಿಂಗ, ರಾಮೇಶ್ವರಲಿಂಗ, ತಾನರಿಯದ ಅದೆಷ್ಟೋ ಶಿವಲಿಂಗಗಳ ನಿಸ್ಸೀಮೆಯಾಗಿದ್ದ ಹಂಪೆಯ ವರ್ಣನೆಯನ್ನು ಹರಿಹರ ಪಂಪಾಕ್ಷೇತ್ರಗಳ ರಗಳೆಯಲ್ಲಿ ವರ್ಣಿಸಿರುವುದನ್ನು ಕಾಣಬಹುದು. ಒಂದರ್ಥದಲ್ಲಿ ಅನುಭಾವ ನೆಲೆಯಿಂದ ಆಚಾರ್ಯ ಪರಂಪರೆಯ ಕಡೆಗೆ ಹೆಜ್ಜೆ ಹಾಕುವುದರ ಮೂಲಕ ವಿಜಯಕಲ್ಯಾಣ, ಸಮಯಕಲ್ಯಾಣ, ಬಸವಕಲ್ಯಾಣದ ಶರಣ ಚಳುವಳಿಯ ಆಶೋತ್ತರಗಳಿಗೆ ವಿಮುಖವಾಗಿ ಬೆಳೆಯಿತು. ಇಂತಹ ವಚನ ಸಂಸ್ಕೃತಿಯನ್ನು ಬದಿಗಿರಿಸಿ ಆಗಮ ಸಂಸ್ಕೃತಿಯನ್ನು ಪ್ರತಿಷ್ಠಾಪಿಸಲು

ಮುಂದಾದಾಗ ಪ್ರಾಯಶಃ ಪರಮಾನಂದ ಅವರ ಶಿಷ್ಯ ದಿಗ್ಗಿ ಸಂಗಮನಾಥ ಅವರ ಶಿಷ್ಯ ಕೊಡೇಕಲ್ಲ ಬಸವಣ್ಣ ಆತನ ಮಗ ರಾಚಪ್ಪಯ್ಯ ಮುಂದುವರೆದು ಇದೇ ಪರಂಪರೆಯಲ್ಲಿ ಬರುವ ಮಂಟೇಸ್ವಾಮಿ ಇವರೆಲ್ಲ ಈ ಬೆಳವಣಿಗೆಯನ್ನು ಖಂಡಿಸಿ ವಿಜಯ ಕಲ್ಯಾಣದ ನಿಜವಾದ ಆಶಯವನ್ನು ಅಮರಕಲ್ಯಾಣ ಹೆಸರಿನಲ್ಲಿ ಶರಣ ಚಳುವಳಿಯನ್ನು ಪ್ರಚುರಪಡಿಸಲು ಮುಂದಾದವು. ಈ ಹಿನ್ನಲೆಯಲ್ಲಿ ೧೨ನೇ ಶತಮಾನದ ವಚನ ಸಾಹಿತ್ಯ ಸ್ವರವಚನ ಸಾಹಿತ್ಯವಾಗಿ ಕಾಲಜ್ಞಾನ, ಖಂಡಜ್ಞಾನ, ನೀತಿಜ್ಞಾನ ಹೆಸರಿನಲ್ಲಿ ವಚನ ಸಾಹಿತ್ಯದ ಆಶಯಗಳು ಬಿತ್ತರಗೊಂಡವು. ವಿಶೇಷವಾಗಿ ಹನ್ನೆರಡನೆಯ ಶತಮಾನದ ಸಿದ್ಧರಾಮ, ಬಸವಸ್ತೋತ್ರದ ತ್ರಿವಿಧಿ ಕೃತಿಯನ್ನು ರಚಿಸಿ ಬಸವಣ್ಣನವರನ್ನು ಕೊಂಡಾಡಿದಂತೆ ಅಮರಕಲ್ಯಾಣ ಪರಂಪರೆಯ ರಾಚಪ್ಪಯ್ಯ ಪ್ರಭುಚರಿತೆ, ಮಹಾದೇವಿಯಕ್ಕನ ಸಾಂಗತ್ಯ, ಗಿರಿಜಾಕಲ್ಯಾಣದಂತಹ ಕೃತಿಗಳಿಗೆ ಮರುಹುಟ್ಟು ನೀಡಿದರು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯೆಂದರೆ ಒಂದೆರಡು ಶತಕದ ಕಾಲಾವಧಿಯಲ್ಲಿ ರಚನೆ ಗೊಂಡ ಹರಿಹರನ ಗಿರಿಜಾಕಲ್ಯಾಣಕ್ಕೂ, ರಾಚಪ್ಪಯ್ಯನ ಪ್ರಭುಚರಿತೆಗೂ ಇರುವ ಕಥಾವ್ಯತ್ಯಾಸವನ್ನು ತೌಲನಿಕವಾಗಿ ಅಧ್ಯಯನ ಮಾಡಿದರೆ ಅಮರಕಲ್ಯಾಣದ ಈ ಕಾವ್ಯಗಳು ನಿಜವಾದ ಸಮಯಕಲ್ಯಾಣದ ಆಶೋತ್ತರಗಳನ್ನು ಪ್ರತಿಪಾದಿಸಿವೆಯೆ ಅಥವಾ ಇಲ್ಲವೆ ಎಂಬ ಕುತೂಹಲದ ಕಡೆಗೆ ಅಧ್ಯಯನಕಾರರ ಗಮನಸೆಳೆಯುತ್ತವೆ.

ಇದು ನಿಜವಾದ ಸಮಯಕಲ್ಯಾಣ ಮತ್ತು ಮುಂದೆ ಬಂದ ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ, ಕಡೆಯಕಲ್ಯಾಣ ಪರಿಸರದ ತಾತ್ವಿಕ ಸ್ವರೂಪದ ಹಿನ್ನಲೆಯಲ್ಲಿ ಇವು ಒಂದೇ ಎಂಬ ಪರಂಪರೆಯ ಅಭಿಪ್ರಾಯಕ್ಕೆ ಬರಬಹುದಾಗಿದೆ.

ಇನ್ನು ಹೆಸರಿನ ಸಾಮ್ಯತೆಯ ದೃಷ್ಟಿಯಿಂದ ಸಮಯಕಲ್ಯಾಣದ ಬಸವಣ್ಣ ಆತನ ಧರ್ಮಪತ್ನಿ ನೀಲಾಂಬಿಕೆ, ಕಡೆಯಕಲ್ಯಾಣದ ಬಸವಣ್ಣ ಮತ್ತು ಆತನ ಧರ್ಮಪತ್ನಿ ನೀಲಾಂಬಿಕೆ, ಸಮಯಕಲ್ಯಾಣದ ಅಂಕಿತ ಸಂಗಮನಾಥ ಇತನ ಶಿಷ್ಯ ದಿಗ್ಗಿ ಸಂಗಮನಾಥ ಹೀಗೆ ಹೆಸರಿನ ಪಾರಂಪರಿಕ ಮುಂದುವರಿಕೆಯನ್ನು ಗಮನಿಸಬಹುದು.

ಭೌಗೋಳಿಕ ಮತ್ತು ಪುರಾತತ್ವ ಅವಶೇಷಗಳ ಹಿನ್ನಲೆಯಲ್ಲಿ ಬಸವಕಲ್ಯಾಣಕ್ಕೂ, ದಿಗ್ಗಿ, ಹೆಬ್ಬಾಳ, ಕೊಡೆಕಲ್ ಈ ಪ್ರದೇಶಗಳಿಗೂ ಸಾಮ್ಯತೆ ಇರುವುದನ್ನು ಕಾಣಬಹುದು. ಅಂದರೆ ಈ ಎಲ್ಲ ಪ್ರದೇಶಗಳು ಮತ್ತೆ ಈ ಸಂತರು ಗವಿಸಂಸ್ಕೃತಿಯನ್ನು ಪುರಸ್ಕರಿಸಿಕೊಂಡು ಬಂದವು. ದಿಗ್ಗಿ ಸಂಗಮನಾಥನ ವಾಸಸ್ಥಾನ ಗವಿಯಾಗಿದೆ. ಹಾಗೆ ಪರಮಾನಂದರು, ಕೊಡೇಕಲ್ ಬಸವಣ್ಣನವರದು ಗವಿ ಆಲಯವಾಗಿರುವುದು ಬಸವಕಲ್ಯಾಣದ ತುಂಬಾ ಶರಣರ ಸ್ಥಳಗಳು ಕಂಡುಬರುತ್ತವೆ. ಈ ಎಲ್ಲಾ ವೈಲಕ್ಷಣಗಳು ಕಲ್ಯಾಣ ಪರಂಪರೆಯ ವಾರಸುದಾರರಾಗಿ ದಿಗ್ಗಿ ಸಂಗಮನಾಥ, ಪರಮಾನಂದರು, ಕೊಡೇಕಲ್ ಬಸವಣ್ಣ ಕಂಡುಬರುತ್ತಾರೆ.

ಮಾನವನ ಜೀವನಾಭ್ಯುದಯಕ್ಕೆ ಧರ್ಮ ಪೂರಕ ಹಾಗೂ ಪ್ರೇರಕ. ಬದುಕನ್ನು ಹಸನುಗೊಳಿಸಿ ಸಾರ್ಥಕಗೊಳಿಸುವುದೇ 'ಧರ್ಮ ಧರ್ಮೋ ರಕ್ಷತಿ ರಕ್ಷಿತಃ' ಎಂಬುದನ್ನು ನಡೆ, ನುಡಿ, ನೋಟದಲ್ಲಿ ಧರ್ಮವನ್ನು ಪರಿಪಾಲಿಸಿದರೆ ಧರ್ಮ ಎಲ್ಲ ಹಂತಗಳಲ್ಲೂ ಎತ್ತಿಹಿಡಿಯುತ್ತದೆ. ಭಾರತವು ಜಾತ್ಯಾತೀತ ರಾಷ್ಟ್ರ, ಸಂಸ್ಕೃತಿಯ ವೈಶಿಷ್ಟ್ಯ ಹಾಗೂ ಧರ್ಮ ಸಮನ್ವಯದ ಭೂಮಿ ಇದಾಗಿದೆ. ಭಾರತದಾದ್ಯಂತವೂ ವ್ಯಾಪಕವಾಗಿ ಪ್ರಚುರಗೊಂಡ ಸಂಪ್ರದಾಯ ಮತ್ತು ಪಂಥಗಳು ಕಂಡುಬರುತ್ತವೆ. ಸಿದ್ಧರ, ಅವಧೂತರ ಆರೂಢರ, ಸಾಧುಗಳ ಕುರಿತು ದೇವಸ್ಥಾನಗಳು, ಪುಣ್ಯಕ್ಷೇತ್ರಗಳು ಸ್ಮೃತಿಯನ್ನು ಜೀವಂತವಾಗಿ ಉಳಿಸಿ ಕೊಂಡು ಬಂದಿವೆ.

"ಕರ್ನಾಟಕ ಧಾರ್ಮಿಕ, ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅನೇಕ ರೀತಿಯ ಸಿದ್ಧರು, ಸಂತರು ತಮ್ಮ ಸಂದೇಶಗಳನ್ನು ಬಿಟ್ಟು ಹೋಗಿದ್ದಾರೆ. ಆತ್ಮ ಸಾಕ್ಷಾತ್ಕಾರವೇ ಮಾನವ ಜೀವನದ ಪರಮ ಗಂತವ್ಯ. ಇದನ್ನು ಪ್ರಸ್ಥಾನತ್ರಯಗಳು ತಿಳಿಸಿಕೊಡುತ್ತವೆ. ಆದರೆ ಅವು ಶ್ರೀಸಾಮಾನ್ಯರಿಗೆ ಗಗನ ಕುಸುಮಗಳು. ಈ ಕಾರಣವಾಗಿ ಕಾರಣಿಕ ಪುರುಷನಾದ ಶ್ರೀ ನಿಜಗುಣ ಶಿವಯೋಗಿಗಳು ಅವುಗಳ ಸಾರವನ್ನೇ ಹೀರಿ ಕನ್ನಡ ಷಟ್‌ಶಾಸ್ತ್ರಗಳನ್ನು ರಚಿಸಿದ್ದಾರೆ. ಇವೆಲ್ಲಾ ಶಾಸ್ತ್ರಗಳನ್ನು ಕರಗತ ಮಾಡಿಕೊಂಡು ಆತ್ಮೋನ್ನತಿಯನ್ನು ಹೊಂದಿದ ಸಿದ್ಧಪುರುಷರು ಆರೂಢರು."[೪]

'ಆರೂಢ' ಎಂದರೆ ಜೀವನ್ಮುಕ್ತ. ಏರುವುದು ಸವಾರಿ ಮಾಡು ಎಂದರ್ಥ. ಆತ್ಮೋನ್ನತಿ ಹೊಂದಿದವರು, ಅಶ್ವರೂಢ ತತ್ವವನ್ನು ಆರೂಢ ಮಾಡಿ ಯೋಗ ಹಾದಿಯ ಅಂತಿಮ ನೆಲೆಯಲ್ಲಿ ನಿಂತವನೇ ತತ್ವಾರೂಢ.

"ಈ 'ಆರೂಢ' ಶಬ್ದ ಆಗಮಗಳಲ್ಲಿಯೇ ಬಳಕೆಗೊಂಡಿರುವುದು ತಿಳಿದು ಬರುತ್ತದೆ ಎಂದು ನಿರುಪಾಧೀಶರು ಹೇಳುತ್ತಾರೆ.

ಆರೂಢ ಸ್ಮೃತದುಚಿತಂ ವೀರಶೈವಸ್ಯಲಿಂಗಿನಃ
ಅಥಾರುರುಕ್ಷೋರಿಶಾನಿ ಹೃದಯಂ ಪೀಠ ಮುಚ್ಛಿತ
ಆರೂಢಸ್ಯ ಹೀ ತಲ್ಲಿಂಗ ಚಿದಾನಂದ ಘನಂ ಮಹತ್[೫]

ಹಾಗೆಯೇ ೧೨ನೇ ಶತಮಾನದ ವಚನಕಾರರ ವಚನಗಳಲ್ಲಿಯೂ ಆರೂಢ ಪದ ಬಳಕೆಗೊಂಡಿದೆ, ಸ್ವತಃ ಅಲ್ಲಮಪ್ರಭು ತನ್ನ ವಚನವೊಂದರಲ್ಲಿ ಆರೂಢತ್ವವನ್ನು ಹೀಗೆ ವ್ಯಾಖ್ಯಾನಿಸಿದ್ದಾನೆ.

"ಅಲ್ಪಜ್ಞಾನಿ ಪ್ರಕೃತಿ ಸ್ವಭಾವಿ, ಮಧ್ಯಮಜ್ಞಾನಿ ವೇಷಧಾರಿ, ಅತೀತಜ್ಞಾನಿ ಆರೂಢ, ಆರೂಢವನಾರೂ ಅರಿಯಬಾರದಯ್ಯ ಜ್ಞಾನವನರಿಯದಾತ ಅಜ್ಞಾನಿ ನಾಮನಷ್ಟ.

ಇಲ್ಲಿ ಅಲ್ಲಮನ ಆರೂಢದ ನೆಲೆಯನ್ನು ಯಾರೂ ಅರ್ಥೈಸಬಾರದು. ಅದು ಅಲ್ಪಜ್ಞಾನ, ಮಧ್ಯಮಜ್ಞಾನ ಹಾಗೂ ಅಜ್ಞಾನವನ್ನು ಮೀರಿದ ಒಂದು ಅತೀತಜ್ಞಾನ, ಅನುಭವದ ವೇದ್ಯಮಾತ್ರ. ಈ ನಿಲುವಿನ ಆರೂಢ ಅಲ್ಲಮನನ್ನು ಚಿತ್ರಿಸಲಾಗಿದೆ."[೬]

"ಪರಮರೂಪನೆ ನಮೊ ಪರಮತತ್ವನೆ ನಮೋ,
ಆದಿಯಾರೂಢ ಭಯಂಕರನೇ ನಮೋ
ಆರೂಢದ ಕೂಟದ ಸುಖದ ಕೂಡಲಸಂಗಯ್ಯ ತಾನೆಬಲ್ಲ
ಆರೂಢವನೆ ಕಲಿತು ಅಂಗ ಸಂಗದಲ್ಲಿಪ್ಪ ಆರೂಢ ಪ್ರಾಣಲಿಂಗವೋ"

ಎಂದು ಬಸವಣ್ಣನವರ ವಚನಗಳಲ್ಲಿ ಮತ್ತು ಅಲ್ಲಮ ಪ್ರಭು, ಚೆನ್ನಬಸವಣ್ಣ, ಸಿದ್ಧರಾಮೇಶ್ವರ ಮುಂತಾದ ಅನೇಕ ವಚನಕಾರರ ಶಿವಶರಣೆಯರ ವಚನಗಳಲ್ಲಿ ಬಳಕೆಗೊಂಡಿರುವುದನ್ನು ಅರಿಯ ಬಹುದಾಗಿದೆ."[೭]

೧೨ನೇ ಶತಮಾನದ ತರುವಾಯ ೧೫ನೇ ಶತಮಾನದ ಆರೂಢ ಪರಂಪರೆಯ ರೂವಾರಿ ದಿಗ್ಗಿ ಸಂಗಮನಾಥನಾಗಿದ್ದಾನೆ. ವಚನಕಾರರನ್ನು ಗಮನಿಸಿದಾಗ ಕಂಡುಬರುವುದೇನೆಂದರೆ ಗುರುಗಳು ಶಿಷ್ಯರನ್ನು ಖ್ಯಾತಿಗೊಳಿಸಿದರು, ಹಾಗೆಯೇ, ತಮ್ಮ ಕೀರ್ತಿ ಶಿಷ್ಯಂದಿರಿಂದಲೇ ಬೆಳಗುವ ಹಾಗೆ ಮಾಡಿದರು. ಗುರು ಅನಿಮಿಷಯೋಗಿಯ ಗುಪ್ತತೆ ಅಲ್ಲಮ ಪ್ರಭುವಿನ ಮೂಲಕ, ಅಜಗಣ್ಣ ಗುಪ್ತತೆ ಮುಕ್ತಾಯಕ್ಕಳಿಂದ, ದಿಗ್ಗಿ ಸಂಗಮನಾಥನ ಗುಪ್ತತೆ ಕೊಡೇಕಲ್ಲ ಬಸವಣ್ಣನವರಿಂದ ತಿಳಿದುಬಂದಿದೆ. ಆರೂಢರು ಅಂಗದ ಮೇಲೆ ಲಿಂಗವಿಲ್ಲದೇ ಪ್ರಾಣವನ್ನು ಆತ್ಮ ಲಿಂಗವನವನ್ನಾಗಿಸಿಕೊಂಡಿರುವುದೇ ಇವರ ಮುಖ್ಯವಾದ ವೈಶಿಷ್ಟ್ಯವಾಗಿದೆ. ಲಿಂಗ ನಿರಾಕಾರಿಗಳಾದ ಇವರು ಆಡಂಬರ ಜೀವಿಗಳಲ್ಲ.

ಕರ್ನಾಟಕದ ಆರೂಢ ತತ್ವಗಳ ಆದ್ಯ ಪ್ರವರ್ತಕರಾಗಿ ನಿಜಗುಣ ಶಿವಯೋಗಿಗಳು, ೧೯ನೇ ಶತಮಾನದಲ್ಲಿ ಸಿದ್ಧಾರೂಢರು ಕಂಡುಬಂದರು. ಜಾತಿ, ಮತ, ಪಂಥ, ಲಿಂಗಭೇದಗಳನ್ನು ನಿರಾಕರಿಸಿ ಸರ್ವರು, ಸಮಾನರು ಎಂಬ ಸಂದೇಶವನ್ನು ಸಾರುವುದೇ, ಆರೂಢ ತತ್ವದ ಮುಖ್ಯ ಉದ್ದೇಶವಾಗಿದೆ.

"ನಾಥಪಂಥದ ರೂವಾರಿಗಳು ಮತ್ಸೇಂದ್ರನಾಥ, ಗೋರಖನಾಥ ಬೇರೆ ಬೇರೆ ಧರ್ಮಗಳ ಪ್ರಭಾವದಿಂದಾಗಿ ರೂಪಾಂತರವನ್ನು ಹೊಂದಿ ಕರ್ನಾಟಕದಲ್ಲಿ ಕಲ್ಯಾಣ ಬಸವಣ್ಣನವರ ಪ್ರಭಾವದಿಂದ ಈ ಪಂಥ ರೂಪವನ್ನು ಬದಲಿಸಿಕೊಂಡು ಆರೂಢ ಪಂಥವಾಗಿ ಬೆಳೆಯಿತು. ಕಲ್ಯಾಣದ ಬಸವಣ್ಣ ಇಷ್ಟಲಿಂಗವನ್ನು ಮುಖ್ಯವಾಗಿಟ್ಟುಕೊಂಡರೆ ದಿಗ್ಗಿ ಸಂಗಮನಾಥ ಪ್ರಾಣಲಿಂಗವನ್ನು ಮುಖ್ಯವಾಗಿಟ್ಟು ಕೊಂಡರು. ಈ ಆರೂಢ ಪಂಥವು ತನ್ನದೇ ಆದ ತತ್ವ ಆಚರಣೆ ಧಾರ್ಮಿಕಪಂಥಗಳನ್ನು ಹೊಂದಿದೆ.

ಅಮರಕಲ್ಯಾಣ ಪರಂಪರೆಯಲ್ಲಿ ಆರೂಢ ಪಂಥವನ್ನು ಸ್ವೀಕರಿಸಿದ ಶರಣರು ದಿಗ್ಗಿ ಸಂಗಮನಾಥ, ತಿಪ್ಪಣಯ್ಯ, ಗುರುಗುಂಡ ಬಸವೇಶ್ವರ, ಕೊಡೇಕಲ್ಲ ಬಸವಣ್ಣವರು ಎಂಬ ವಿಚಾರ ಗುರುಗುಂಡ ಬಸವೇಶ್ವರ ಚರಿತ್ರೆ ಮತ್ತು ನಂದಿಯಾಗಮಲೀಲೆ ಕಾವ್ಯಗಳಿಂದ ತಿಳಿದುಬರುತ್ತದೆ."[೮]

ತೊಟ್ಟರು ಆರೂಢ ಸ್ಥಲವನು ತೋರುವರು ತೋರ್ವರು
ತುಟ್ಟನ ತುದಿಗೆ ಜನಿತರು ತಾರೀಯ ಸ್ಥಲದವರು
ಅಷ್ಟಮಾಸಿದ್ಧಿಯ ತಾಂಬವರು ಅವರೇ ಒಡೆಯರು
ಕಟ್ಟಾಳು ನಿಮ್ಮ ಅಳುಕಿನ ಕೀಳಿಗೆ
ಕೊಟ್ಟು ನುಡಿಸಿದ ಅಭಯದ ವಾಕ್ಯವ ಆದಿ ಅನಾದಿಯ
ಪಟ್ಟಾಭಿಷೇಕರು ಬರುವ ಬಾರ
ದೃಷ್ಟಿಗಳು ಉಭಯತವು ಉದಯ ಕಾಲಕ್ಕೆ
ಕಟ್ಟಳೆಯ ನುಡಿ ಹೇಳಿ ಕಟ್ಟೆಮಾಡಿದೆ ಕಾಣಾ
ಎಲೆ ನಮ್ಮ ಕೂಡಲ ಚೆನ್ನಸಂಗದೇವಯ್ಯ"[೯]

ಆರೂಢ ಸ್ಥಲಿಕೆ ಆರೂಢ ಲಿಂಗವನು ಇನ್ನು ಬೇರೆ ಅರಸುವರೆ ಭೇದ ಭೇದ್ಯರು ಮುರುಹಿದೆ ಮೌಲ್ಯದೊಳು ಅಲ್ಲದೆ ದೋರಣಕುಂಟು ಬಾರಿಯ ಹಣ್ಣಿನೊಳು ಹುಳುವು."[೧೦]

"ತೋರುವುದೆ ತನ್ನ ಬಿಲವ ತೊರೆದು ಮತ್ತೆ
ಚಾರಿಗೆ ಪತಿವ್ರತಾ ಧರ್ಮ ಸೇರುವುದೆ
ತನ್ನ ಗುಣಕ್ಕೆ ತಾನೆ ವೆಗ್ಗಳ
ಊರೊಳು ಶರಣ ಉದ್ಭವಿಸಲು
ಕಾರಣವೆ ಅಕುಲದೂರವು ಲೋಕಕ್ಕೆ
ನೀರಹೊಳೆ ಅಗಸರ ಮನೆ
ಸೇರಗೊಡದೆ ವರ್ಜಿತ ಕಾಣಾ
ಕೂಡಲಚೆನ್ನಸಂಗಯ್ಯ

ಷಟಸ್ಥಲಗಳಲ್ಲಿ ಕೊನೆಯ ಸ್ಥಲವೇ ಆರೂಢ ಸ್ಥಲವಾಗಿದೆ.

ಆರನರಿತು ಮೂರ ಮರೆತು
ಮೀರಿ ಆರು ಮೆಟ್ಟಿ ನಿಂತು
ತೋರಿ ಅಷ್ಟಮದವ ತುಳಿದು
ಮೀರಿ ಆರೂಢ ಪಥವನರಿಯದೆ[೧೧]

"ಪರಂಪರೆಯನ್ನು ಹರಿವ ನದಿಗೆ ಹೋಲಿಸಬಹುದು. ಒಂದು ನದಿ ಎಲ್ಲಿಯೋ ಉಗಮಿಸಿ ಮಂದವಾಗಿ ಹರಿಯುತ್ತಾ, ಹಾದಿಯಲ್ಲಿ ಇಕ್ಕೆಲದ ತೊರೆ ಪ್ರವಾಹಗಳನ್ನು ಮೈಗೂಡಿಸಿಕೊಂಡು ರಭಸ ಪಡೆಯುತ್ತದೆ. ಮುಂದೆ ಯಾವುದೋ ಒಂದು ಘಟ್ಟದಲ್ಲಿ ಅದು ಟಿಸಿಲು ಟಿಸಿಲಾಗಿ ಒಡೆದು ಅನೇಕ ರೂಪಗಳನ್ನು ತೊಡಬಹುದು. ಇಲ್ಲವೇ ಅಖಂಡವಾಗಿ ಸಾಗಿ ಸಮುದ್ರವನ್ನು ಸೇರಬಹುದು. ಯಾವುದೇ ಪರಂಪರೆಯಾದರೂ ಹಾಗೆಯೇ ಯಾರೋ ಆರಂಭಿಸುತ್ತಾರೆ, ನಡುವೆ ಯಾರೋ ಅದರ ಶಕ್ತಿಯನ್ನು ವರ್ಧಿಸುತ್ತಾರೆ, ಮುಂದೆ ಯಾರೋ ಅದರ ಶಕ್ತಿಯನ್ನು ಗ್ರಹಿಸಿ ಬೆಳೆಯುತ್ತಾರೆ, ಬೆಳೆಸುತ್ತಾರೆ. ಕೊಡೇಕಲ್ ಬಸವಣ್ಣನವರ ಪರಂಪರೆ ಅಕ್ಷರಶಃ ಅವನಿಂದಲೇ ಆರಂಭವಾಯಿತೆಂದು ಹೇಳಲು ಬಾರದು. ಅವನ ಗುರು ಆರೂಢ ಸಂಗಮೇಶ್ವರನಲ್ಲಿ ಅದು ಸುಳುಹುದೋರಿತು. ಕೊಡೇಕಲ್ ಬಸವನ ಕೈಯಲ್ಲಿ ಅದು ಶಕ್ತಿ ಸಂಪನ್ನವಾಯಿತು. ಅದರ ತೇಜಸ್ಸು-ಓಜಸ್ಸುಗಳು ಹಲವರನ್ನು ಅವನ ಕೊಡೇಕಲ್‌ನತ್ತ ಆಕರ್ಷಿಸಿತು. ಹಾಗೆ ಆಕರ್ಷಿತರಾಗಿ ಬಂದ ಮಂಟೇಸ್ವಾಮಿ, ತಿಂಥಿಣಿ ಮೋನಪ್ಪಯ್ಯ, ಸಾಲೋಟಗಿ ಶಿವಯೋಗಿಶ್ವರ ಮುಂತಾದವರು ಅವನ ಶಿಷ್ಯರಾಗಿ ನಿಂತರು. ಗುರು ಕೊಡೇಕಲ್ ಬಸವನ ಪರಂಪರೆಯನ್ನು ಬಾಳುತ್ತ-ಬೋಧಿಸುತ್ತ ಮುಂದೆ ತಾವೇ ಒಂದು ಪರಂಪರೆಯಾದರು."[೧೨]

"ಕೊಡೇಕಲ್ ಬಸವನ ಬೆನ್ನಿಗೆ ಅವನ ಗುರುಪರಂಪರೆ ಇದೆ. ಕಣ್ಮುಂದೆ ಅವನ ಶಿಷ್ಯ ಪರಂಪರೆ ಇದೆ. ನಡುವೆ ತೋರುದೀಪವಾಗಿ ಆ ಒಟ್ಟು ಪರಂಪರೆಯ ಉಜ್ವಲವಾಗಿ ಕೊಡೇಕಲ್ ಬಸವ ನಿಂತಿದ್ದಾನೆ."[೧೩]

"ಕೊಡೇಕಲ್ ಬಸವನಿಗೆ ಇಬ್ಬರು ಪತ್ನಿಯರೆಂದೂ, ಮೊದಲನೆಯ ಹೆಂಡತಿ ವಡ್ಡಿನ ಎಂಬ ಊರಿನ ಕಾಶಮ್ಮ ಎಂಬಾಕೆಯೆಂದೂ, ಆಕೆ ವಿಜಯನಗರದಲ್ಲಿ (ಕೊಡೇಕಲ್ ಬಸವಣ್ಣನ ಜನ್ಮಸ್ಥಳ) ಮಡಿದ ಮೇಲೆ ಕೊಡೇಕಲ್ ಬಸವ ಬಳ್ಳಿಗಾವೆ (ಶಿವಮೊಗ್ಗ ಜಿಲ್ಲೆ)ಯ ಪಂಚವಣ್ಣಿಗೆ ಮಠದ ಸಿದ್ದಯ್ಯ-ಚೆನ್ನಮ್ಮರ ಮಗಳು ಮಹಾದೇವಮ್ಮ (ನೀಲಮ್ಮ) ಎಂಬಾಕೆಯನ್ನು ಮದುವೆಯಾದನೆಂದು ನಂದಿಯಾಗಮ ಲೀಲೆಯಿಂದ ತಿಳಿದುಬರುತ್ತದೆ."[೧೪]

"ಸುತರು ಮೂವರು ನೀಲಾಂಬಿಕೆಗೆ,
ಪ್ರಥಮದಲಿ ರಾಚಣ್ಣ-ಅಗ್ರಜ,
ದ್ವಿತಿಯದಲಿ ಗುಹೇಶ್ವರನು ಸಂಗಯ್ಯನೆಂಬ ಬಾಲಕನು"[೧೫]

ಕೊಡೇಕಲ್ಲ ಬಸವಣ್ಣ ಮತ್ತು ನೀಲಮ್ಮ ದಂಪತಿಗಳಿಗೆ ರಾಚಪ್ಪಯ್ಯ, ಗುಹೇಶ್ವರ, ಸಂಗಪ್ಪಯ್ಯ ಎಂಬ ಮೂವರು ಮಕ್ಕಳಿದ್ದರು. ಇವರು ನಂತರ ತಮ್ಮ ಜ್ಞಾನ, ಪ್ರತಿಭೆ, ವಿದ್ವತ್‌ಶಕ್ತಿಯಿಂದ ಹಿರಿಯರ ಮಾರ್ಗದರ್ಶನದಿಂದ ತಂದೆಯ ಸ್ಥಾನವನ್ನು ಪಡೆದುಕೊಂಡರು.

### ೫.೧. ಗುರುಪರಂಪರೆ

"ಪತ್ರಿಯೊಬ್ಬ ವ್ಯಕ್ತಿಯ ಬೆಳವಣಿಗೆಯ ಹಿಂದೆ ಒಬ್ಬ ಗುರು ಇರುವಂತೆ, ಕೊಡೇಕಲ್ ಬಸವನ ಸಿದ್ಧವ್ಯಕ್ತಿತ್ವದ ಹಿಂದೆ ಒಬ್ಬ ಸಿದ್ಧಪುರುಷನಿದ್ದಾನೆ. ಆತನೇ ದಿಗ್ಗಿಯ ಆರೂಢ ಸಂಗಮೇಶ್ವರ. ಈ ಸಂಗಮೇಶ್ವರನಿಗೂ ಒಬ್ಬ ಗುರುವಿದ್ದ, ಆತನೇ ಕೊಡೇಕಲ್ ಪ್ರಭು ಪರಮಾನಂದ."[೧೬]

#### ೫.೧.೧. ಪರಮಾನಂದ ಪ್ರಭು

"ಅಮರ ಕಲ್ಯಾಣ ಪರಂಪರೆಯ ಚೈತನ್ಯವಾದ ದಿಗ್ಗಿ ಸಂಗಮನಾಥನ ಗುರು ಈ ಪರಮಾನಂದ ಪ್ರಭು. ಇನ್ನೊಂದರ್ಥದಲ್ಲಿ ಈತ ಕೊಡೇಕಲ್ಲಿ ಬಸವನ ಗುರುವಿನ ಗುರು ಆಗಿದ್ದಾನೆ."[೧೭]

"ಜನ್ಮ ವ್ಯರ್ಥವ ಮಾಡುವ ಅಲ್ಲಮಗೆ
ಒಲ್ಮೆ ನಿಮ್ಮಿಂದ ಘನವು
ಕಲ್ಮಷವ ತೊಳೆವ ಗುರು ಪರಮನಯ್ಯ
ಕಲ್ಮನವ ಕೊಟ್ಟ ಘನವ"[೧೮]

೧೨ನೇ ಶತಮಾನದಲ್ಲಿದ್ದ ಹಿರಿಯ ಜ್ಞಾನಿ, ಶೂನ್ಯ ಸಿಂಹಾಸನದ ಅಧಿಪತಿಯೆಂದು ಕೀರ್ತಿವೆತ್ತ ಸಾಕ್ಷಾತ್ ಅಲ್ಲಮ ಪ್ರಭುವೇ ಕೊಡೇಕಲ್ಲ ಸಾಹಿತ್ಯದಲ್ಲಿ ಬರುವ ಪರಮ ಇಲ್ಲವೆ ಪರಮಾನಂದ ಪ್ರಭುವಾಗಿದ್ದಾನೆ.

"ಉತ್ತರ ಕರ್ನಾಟಕ ಭಾಗದಲ್ಲಿ ಪರಮಾನಂದ ಪ್ರಭು ಸಂಚರಿಸಿ ಭಕ್ತರನ್ನು ಉದ್ಧರಿಸಿದ ಕುರುಹುಗಳಿವೆ. ವಿಜಾಪುರ ಜಿಲ್ಲೆಯ ಹೂವಿನ ಹಿಪ್ಪರಗಿ, ಉಕ್ಕಲಿ, ಮಸಬಿನಹಾಳು (ಬಾಗೇವಾಡಿ ತಾಲೂಕು) ಚಾಂದಕವಟೆ (ಸಿಂದಗಿ ತಾಲೂಕು) ಮುಂತಾದ ಊರುಗಳಲ್ಲಿ ಈ ಪರಮಾನಂದನ ಗುಡಿಗಳಿದ್ದು ಇಲ್ಲಿ ಈತ ಅಲ್ಲಮಪ್ರಭು ಹೆಸರಿನಲ್ಲಿ ಪೂಜೆಗೊಳ್ಳುತ್ತಿದ್ದಾನೆ. ಹೂವಿನ ಹಿಪ್ಪರಗಿಯಲ್ಲಿ ಈತನ ಮೇಲೆ ಬರೆದ ಅಷ್ಟೇನೂ ಪ್ರಾಚೀನವಲ್ಲದ ಪುರಾಣವೂ, ಹೇರಳವಾದ ಐತಿಹ್ಯಗಳೂ ಪ್ರಚಲಿತದಲ್ಲಿದೆ. ಈ ಐತಿಹ್ಯಗಳ ಪ್ರಕಾರ ತಮಿಳುನಾಡಿನ ಶಿವಕಂಚಿ ಈತನ ಊರು. ವಿಷ್ಣುಕಂಚಿ ತಾಯಿಯ ತವರೂರು. ತಂದೆ-ತಾಯಿಗಳು ಮದುವೆ ಮಾಡಲು ಮುಂದಾದಾಗ ಈತ ಮನೆತೊರೆದು ದೇಶಾಂತರ ಹೊರಟು ಆಂಧ್ರಪ್ರದೇಶದ ಕಡೆಗೆ ಬಂದನಂತೆ, ಕರ್ನಾಟಕದಲ್ಲಿ ಸಂಚರಿಸುತ್ತಾ ಹೆಬ್ಬಟ್ಟಿನ ಮೇಲೆ ಹೆಬ್ಬಾಳದಲ್ಲಿ (ಸುರಪುರ ತಾಲೂಕು) ತಪೋನಿರತನಾದುದಾಗಿ ಹೇಳಲಾಗುತ್ತದೆ. ಈತನ ಹಿಂದೆ ಯಾವಾಗಲೂ ಸಿದ್ದಪ್ಪ ಎಂಬಾತ ಇರುತ್ತಿದ್ದನೆಂದೂ ಹೆಬ್ಬಾಳದಲ್ಲಿ ನೆಲೆನಿಂತಾಗ ದಿಗ್ಗಿ ಸಂಗಮನಾಥ, ಖಾದರಲಿಂಗ ಎಂಬ ಇಬ್ಬರೂ ಶಿಷ್ಯರೂ ಜೊತೆಯಾದರೆಂದೂ ಈ ಐತಿಹ್ಯಗಳ ಬಲವಾದ ನಂಬಿಕೆ."[೧೯]

ದಿಗ್ಗಿಯ ಆರೂಢ ಸಂಗಮನಾಥನು ಕೊಡೇಕಲ್ ಬಸವನ ಗುರುವಾಗಿದ್ದಾನೆ. ದಿಗ್ಗಿಯಲ್ಲಿ ಸಂಗಮೇಶ್ವರನ ಗವಿಯೊಂದಿಗೆ ಮೇಲೆ ಪರಮಾನಂದ ಅಥವಾ ಪ್ರಭುದೇವನ ಗವಿಯು ಇರುವುದನ್ನು ಕಾಣಬಹುದು. ಪರಮಾನಂದರು ತಪೋನಿರತನಾದನೆಂದು ಹೇಳುವ ಹೆಬ್ಬಾಳ ಗ್ರಾಮದಲ್ಲಿ ಪರಮಾನಂದನ ಗುಡ್ಡವು ಈಗಲೂ ಇದೆ.

"ಕೊಡೇಕಲ್‌ನಲ್ಲಿ ಬಸವನ ದೇವಾಲಯಕ್ಕಿಂತ ಒಂದು ಕೈ ಮಿಗಿಲಾಗಿಯೇ 'ಪ್ರಭುದೇವರ ಗುಡಿ' ಎಂಬ ದೇವಾಲಯವೊಂದು ಮುಸ್ಲಿಂ ಶೈಲಿಯಲ್ಲಿ ರಚನೆಗೊಂಡಿದ್ದು, ಕೊಡೇಕಲ್ ಉತ್ಸವಗಳೆಲ್ಲ ಈ ಗುಡಿಗೆ ಬಂದು ಹೋಗುವುದಿದೆ. ಈ ಪ್ರಭುದೇವರ ಗುಡಿ ಪ್ರಭು ಪರಮಾನಂದನೇ ಏಕಾಗಿರಬಾರದು? ಕೊಡೇಕಲ್ ಸಾಹಿತ್ಯ ಸ್ತುತಿಸುವ ಪ್ರಭು ಕೊಡೇಕಲ್ಲಿನ ಈ ಪ್ರಭುದೇವರಾಗಿದ್ದು, ಈತನೇ ಪರಮ ಇಲ್ಲವೆ ಪರಮಾನಂದ ಎಂದು ಹೇಳಬಹುದು. ಇವತ್ತಿಗೂ ಹೂವಿನ ಹಿಪ್ಪರಗಿಯ ಪರಮಾನಂದನ ದೇವಾಲಯದ ಪೂಜಾರಿಗಳು ತಾವು ದೇವರ ಹೇಳಿಕೆ ಮಾಡುವ ಮುನ್ನ ಶ್ರೀಶೈಲಕ್ಕೆ ಹೋದವರು ಅವಶ್ಯ ಕೊಡೇಕಲ್ಲಿಗೆ ಬಂದು ಇಲ್ಲಿನ 'ಪ್ರಭುದೇವರ ಗುಡಿ'ಯಲ್ಲಿ ಒಂದು ರಾತ್ರಿ ವಾಸ್ತವ್ಯ ಮಾಡುತ್ತಾರೆ. ಇದು ಹೂವಿನ ಹಿಪ್ಪರಗಿಯ ಪರಮಾನಂದ ಮತ್ತು ಕೊಡೇಕಲ್ಲಿನ ಪ್ರಭುದೇವರು ಒಂದೇ ಎಂಬುದನ್ನು ಸೂಚಿಸುತ್ತದೆ."[೨೦]

"ಪರಮಾನಂದ ಪ್ರಭುವು ಸಾಹಿತ್ಯ ರಚನೆ ಮಾಡಿದಂತಿಲ್ಲ. ಅಮರಕಲ್ಯಾಣದ ಶರಣರಿಗೆ ಪ್ರಧಾನವಾಗಿ ಆರೂಢ ಸಂಗಮೇಶನಿಗೆ ಈತ ಮಾಡಿರಬಹುದಾದ ಬೋಧಸಾಹಿತ್ಯ ದಾಖಲೆಯಾಗಿರದಿದ್ದರೂ ಈತ ತನ್ನ ಕಾಲದ ಸಕಲರಿಗೆ ಬೋಧೆ ನೀಡಿದ ಅಪ್ರತಿಮಯೋಗಿ ಎಂಬುದರಲ್ಲಿ ಸಂಶಯವಿಲ್ಲ. ಕೆಳಗಿನ ನುಡಿ ಈತನ ವ್ಯಕ್ತಿತ್ವದ ಮೇಲೆ ಬೆಳಕು ಬೀರುತ್ತವೆ."[೨೧]

"ಪರಮನೆ ಗುರುಲಿಂಗ ಪರಮನೆ ಜಂಗಮ,
ನರರೂಪು ಎನಬೇಡ ಮರುಳೆ,
ಕನ್ನಡಿಯೊಳು ಮುಖ ಚೆನ್ನಾಗಿ ತೋರ್ಪುದು
ತನ್ನ ಮುಖದ ಕಳಿಯವು"[೨೨]

೧೨ನೇ ಶತಮಾನದ ಶ್ರೇಷ್ಠ ವಚನಕಾರನಾದ ಅಲ್ಲಮಪ್ರಭುವಿಗೆ ಇದ್ದ ಘನತೆ ಗುರು ಪರಮಾನಂದರಿಗೂ ಇತ್ತು ಎಂದು ತಿಳಿದುಬರುತ್ತದೆ.

"ನಡೆಪುರುಷ ನುಡಿಪುರುಷ ದೃಢದಲಿ
ಹಿಡಿಯುವದೆ ಭಾವಪುರುಷ
ಕಡುಗಲಿಗೆ ಪ್ರಣನು ಪರುಷ ಜ್ಞಾನಕ್ಕೆ
ತುಡುಕುವದೆ ಗುರುಪರಮ ಪರುಷ"[೨೩]

ಜ್ಞಾನಪರುಷದ ಮೂರ್ತಿಯಾದ ಸಾಕ್ಷಾತ್ ಅಲ್ಲಮ ಪ್ರಭುವಿನ ಸ್ವರೂಪಿಯಾದ ಗುರು ಪರಮಾನಂದ ಕೊಡೇಕಲ್ ಬಸವಣ್ಣನವರ ಆರೂಢಪಥಕ್ಕೆ ಸದ್ಗುರುವಾಗಿದ್ದಾನೆ. ಆರೂಢ ಸಂಗಮೇಶ್ವರ, ಕೊಡೇಕಲ್ ಬಸವಣ್ಣನಂಥಹ ಶ್ರೇಷ್ಠ ವ್ಯಕ್ತಿಗಳು ಗುರು ಪರಮಾನಂದ ಪ್ರಭುವಿನ ಶಿಷ್ಯರಾಗಿರಬೇಕಾದರೆ ಗುರು ಪರಮಾನಂದರು ಆ ಕಾಲದ ಶ್ರೇಷ್ಠ ವ್ಯಕ್ತಿಯಾಗಿರಬೇಕು ಎನಿಸುತ್ತದೆ. ಈ ಗುರುವಿನ ವ್ಯಕ್ತಿತ್ವ ಸಾಧನೆಗಳನ್ನು ಉಲ್ಲೇಖಿಸಿದ್ದಾರೆ.

"ಯುಗ ಅನಂತ ಆತ್ಮವಿದು ತ್ರಿಗುಣವಿಧ
ಅಗಣಿತನು ಎಂದರಿಯದೆ
ಜಗವೆಲ್ಲಾ ಬರಡಾಯಿತು ಪರಮಗುರು
ಸುಗುಣನೆಂದು ಕಾಣದೆ"[೨೪]

"ದೇವ ಪರಮಾನಂದನು ಜಗಭರಿತ
ಸೇವಕರು ಸರ್ವರೆಲ್ಲ
ಭಾವಾರ್ಪಿತಕೆ ಬಹುಹಿತನು ಜನಿತಂಗೆ
ಕಾಯಸಿದ್ಧಿಯ ತೋರುವ"[೨೫]

ಗುರು ಪರಮಾನಂದನು ಕೊಡೇಕಲ್ ಪರಂಪರೆಗೆ ಒಡೆಯನು. ಗುರು ಸ್ವರೂಪನು ಕಾಯಸಿದ್ಧಿಯನ್ನು ಶಿಷ್ಯರಿಗೆ ಹೇಳುತ್ತಾ ಹಲವು ತತ್ವಗಳ ಸುಗುಣರೂಪವೇ ಪರಮಾನಂದನಾಗಿದ್ದಾನೆ. ಹಿರಿಯ ಜ್ಞಾನಿಯಾದಂತೆ ಅಲ್ಲಮಪ್ರಭುವಿನಂತೆ ಈತನು ಕಂಡುಬರುತ್ತಾನೆ. ಸಾಕ್ಷಾತ್ ಗುರುಲಿಂಗ ಜಂಗಮ ಸ್ವರೂಪಿಯಾದ ಪರಮಾನಂದನು ನಿಃಕಾಯದವನು ಸರ್ವರ ಕಲ್ಮಷವ ತೊಳಿವ ಗುರುವಾಗಿದ್ದಾನೆ.

### ೫.೧.೨. ಸಂಗಮನಾಥ

ಗುರು ಪರಮಾನಂದರ ವ್ಯಕ್ತಿತ್ವದ ಹಾಗೆಯೇ ಆರೂಢ ಸಂಗಮನಾಥನ ವ್ಯಕ್ತಿತ್ವವಿದೆ. ಪರಮಾನಂದರ ಶಿಷ್ಯನಾದ ಸಂಗಮನಾಥನು ಕೊಡೇಕಲ್ ಪರಂಪರೆಯ ಮುಖ್ಯ ರೂವಾರಿಯಾಗಿದ್ದಾನೆ.

"ಬಿಟ್ಟಮಂಡೆಯ ಮೇಲೆ ಕಿರುಜಡೆ
ಸುಟ್ಟು ಉರಿಯುವ ನಯನ ನೊಸಲಲಿ
ಮುಟ್ಟಿದ ಹಾವುಗೆಯು ಪಾದದಿ ಕಮಲಲೋಚನವು
ಮುಟ್ಟಿ ಹಸ್ತದಿ ನಾಗದಂಡವು
ಕಟ್ಟಿದ ಕಟಿಸೂತ್ರ ಕೃಪವು
ಇಟ್ಟ ಸರ್ವಾಂಗದಲಿ ಭಸಿತರೂಢ ರೂಪಿನಲಿ"[೨೬]

"ಆರೂಢ ಸಂಗಮನಾಥನ ಚಿತ್ತವೃತ್ತಿ ಇಲ್ಲಿ ಮೂಡಿಬಂದಿದೆ. ಜಡೆ, ಹಾವುಗೆ, ನಾಗದಂಡಗಳು ಅವನೊಬ್ಬ ಯೋಗಿ ಎಂಬುದನ್ನು ಸಾರುತ್ತವೆ. "ರೂಪು ತಪ್ಪಿಸಿ ಬಂದು ನಿಂತನು ಸಂಗಮೇಶ್ವರನು" ಎಂಬ ಸಾಲುಗಳಿವೆ. ಸಾಕ್ಷಾತ್ ಕೂಡಲಸಂಗಮೇಶ್ವರನೇ ಮೂಲ ಶಿವನ ವೇಷ ಬಿಟ್ಟು ಈ ಆರೂಢ ವೇಷ ಧರಿಸಿ ಬಂದನೆಂದು ಇಲ್ಲಿಯ ಅರ್ಥ. ಪ್ರಾಯಶಃ ಸಂಗಮೇಶ್ವರನೆಂಬ ಈ ವ್ಯಕ್ತಿ ಮೂಲತಃ ಬೇರೆಯೇ ಇದ್ದವನು ವೀರಶೈವ ಈಗ ಆರೂಢನಾಗಿ ಬಂದಿದ್ದಾನೆ ಎಂಬ ಅರ್ಥವನ್ನು ಹೇಳಬಹುದು."[೩೭]

"ಈ ಪರಿ ಉದ್ಯಮವ ಮಾಡುತ
ವ್ಯಾಪಾರಗಳ ನಡೆಸುತಿರಲು
ರೂಪ ತಪ್ಪಿಸಿ ಬಂದು ನಿಂತನು ಸಂಗಮೇಶ್ವರನು
ದೀಪ ಬೆಳಗಿಗೆ ತಮವು ಪರಿದೊಲು
ಈ ಪರಿಯಲಿ ಕಾಣಗೂಡದೆ
ತಪ್ಪಿಸಿದನು ಮನದ ಬೆಳಗಿನ ಅರುಹ ಮರೆಮಾಡಿ"[೩೮]

"ಕೊಡೇಕಲ್ ಬಸವನನ್ನು ವೀರಶೈವದಿಂದ ಆರೂಢ ಪಂಥದ ತಾತ್ವಿಕ ವಲಯಕ್ಕೆ ಎತ್ತಿಕೊಂಡವನು ಆರೂಢ ಸಂಗಮೇಶ್ವರನೆಂದು ನಂದಿಯಾಗಮಲೀಲೆ ಹೇಳುತ್ತದೆ. ಕೊಡೇಕಲ್ ಬಸವ ವೀರಶೈವ ಬಣಜಿಗರ ಮನೆತನದಲ್ಲಿ ಹುಟ್ಟಿ, ಮದುವೆಯಾಗಿ ಮನೆತನದ ವ್ಯಾಪಾರ ವೃತ್ತಿಯನ್ನು ಮುಂದುವರೆಸಿ ಕೊಂಡು ಹೋಗುವ ಸ್ಥಿತಿಯಲ್ಲಿದ್ದಾಗ ಈ ಸಂಗಮೇಶ್ವರ ವಿಜಯನಗರದಲ್ಲಿ ಥಟ್ಟನೆ ಕಾಣಿಸಿಕೊಂಡು ಬಸವನ ಮುಂದೆ ನಿಲ್ಲುತ್ತಾನೆ. ಅವನೊಳಗೆ ಹುದುಗಿರುವ ಅಗಾಧವಾದ ಚೈತನ್ಯದ ಪರಿಚಯ ಮಾಡಿಕೊಟ್ಟು ಬಸವನ ಇಹದ ಮೋಹವನ್ನು ಕತ್ತರಿಸಿ ಹಾಕುತ್ತಾನೆ. ಸಾಕ್ಷಾತ್ ಬಸವನ ಅವತಾರವೇ ನೀನೆಂದು ನಂಬಿಸಿ ಲೋಕೋದ್ಧಾರದ ಘನಮಣಹಕ್ಕೆ ಆತನನ್ನು ಎಳೆಯುತ್ತಾನೆ. ಬಸವ ಧರಿಸಿದ್ದ ಇಷ್ಟಲಿಂಗ ಬಿಡಿಸಿ, ಚರ್ಮಾಂಬರ ತೊಡಿಸಿ, ಹನ್ನೊಂದು ಅಮರಗನ್ನಡ ಲಿಪಿಯಿತ್ತು, ಕಾಲಲ್ಲಿ ಹಿಂದೂ-ಮುಸ್ಲಿಂ ರಕ್ಷೆಗಳನ್ನು ತೊಡಿಸಿ ಲೋಕ ಸುತ್ತುತ್ತಾ 'ಅದ್ವೈತ' ಬೋಧೆ ಸಾರಲು ಬೀಳ್ಕೊಡುತ್ತಾನೆ ಎಂಬುದಾಗಿ ನಂದಿಯಾಗಮಲೀಲೆ ಮತ್ತು ಕಾಲಜ್ಞಾನ ಕಟ್ಟಳೆ ಹೇಳುತ್ತವೆ."[೩೯]

ಶಿಷ್ಯನಾದವನು ಗುರುವನ್ನು ಹುಡುಕಿಕೊಂಡು ಹೋಗುವುದು ಸ್ವಾಭಾವಿಕ. ಆದರೆ ಇಲ್ಲಿ ಭಿನ್ನ ಗುರುವೇ ಶಿಷ್ಯನನ್ನು ಹುಡುಕಿಕೊಂಡು ಹೋಗಿ ಶಿಷ್ಯನಿಗೆ ಉಪದೇಶ ಮಾಡಿ ಲೋಕದ ಉದ್ಧಾರಕ್ಕೆ ಸಜ್ಜುಗೊಳಿಸುವುದು ಇದು ಅಚ್ಚರಿಮೂಡಿಸುವುದಾಗಿದೆ. ವಿಜಯನಗರಕ್ಕೆ ಬರುವ ಮುನ್ನ ಆರೂಢ ಸಂಗಮೇಶ್ವರನು ಎಲ್ಲಿಯವನು, ಎಲ್ಲಿದ್ದನೆಂದು ತಿಳಿಯದು. ಈತ ಮೂಲತಃ ವಿಜಯನಗರದವನೇ ಅಥವಾ ವಿಜಯನಗರಕ್ಕೆ ಬಂದವನೆ ತಿಳಿಯದು. ವಿಜಯನಗರದಲ್ಲಿ ಪ್ರತ್ಯಕ್ಷನಾದ ಸಂಗಮೇಶ್ವರನ ವರ್ತನೆಯನ್ನು ಗಮನಿಸಿದರೆ ಈ ಲೋಕವನ್ನು ಉದ್ಧರಿಸಲು ಬೇಕಾಗಿರುವ ಸಮರ್ಥ ವ್ಯಕ್ತಿಗಾಗಿ

ಎಲ್ಲೆಡೆಯಲ್ಲಿ ಹುಡುಕಾಡುತ್ತಿದ್ದನೇನೋ ಅದೇ ಸಂದರ್ಭದಲ್ಲಿ ಕೊಡೇಕಲ್ ಬಸವಣ್ಣನವರು ದೊರೆತರು. ಆಗ ಅವರಿಗೆ ತಿಳಿವನ್ನ ಬೋಧಿಸಿದರು.

ಬಂದು ಬಸವನು ಪಾದಕೆರಗುತ
ಅಂದು ಕಲ್ಯಾಣದ ಲಿಪಿಯ ಕಳುಹಿದೆ
ಇಂದು ಏಕಾದಶಿಯ ಲಿಪಿಯ ಪತ್ರವನಿತ್ತು
ತಂದೆ ಸಂಗಮನು ಮಾತ್ರ ಕೂನವ
ಹಿಂದು ಮುಂದಣ ಅರಹು ತೋರಿದ
ನಿಂದು ಮನದ ಬೆಳಗು ಹರಿದಾ ತಮವು ಪರಿದೊಡೆ"[೩೦]

"ಶಿಷ್ಯನನ್ನಾಗಿ ಸ್ವೀಕರಿಸಿದ ಕೊಡೇಕಲ್ಲ ಬಸವನಿಗೆ ಹನ್ನೊಂದು ಬಗೆಯ ಅಮರಗನ್ನಡ ಲಿಪಿಯನ್ನು ನೀಡಿರುವುದಲ್ಲದೆ ಕಲ್ಯಾಣ ಬಸವನಿಗೂ ಲಿಪಿಜ್ಞಾನವನ್ನು ಹೇಳಿದ ಸಂಗಮನಾಥನೆಂದು ಅಭೇದದಲ್ಲಿ ವರ್ಣಿಸಲಾಗಿದೆ."[೩೧]

ಹಸ್ತಮಸ್ತಕ ಮಾಡಿ ಬಸವಗೆ
ಇತ್ತ ಮಾಯದ ತೇಜಿ ನಾಲ್ವರು
ಭೃತ್ಯರು ಅದೃಶ್ಯರೂಪಿನ ಸೇವಕರನಾಗ
ಮತ್ತೆ ನುಡಿಯ ಪರುಷ ಇತ್ತನು
ಎತ್ತಿ ತೊಡಿಸಿದ ಚರ್ಮದಂಬರ ಸ
ಸಸ್ತ ಕಾರ್ಯವನಿತ್ತು ಸಂಗಮ ಬಿಜೆಯ ಮಾಡಿದನು"[೩೨]

"ಕಾಲು ಕುಪ್ಪಸ ತೊಟ್ಟ ಸಂಗಮನಾಥ
ಲೋಲ ಕಂಸಿಯ ಮೆಟ್ಟಿದ
ಕಾಲಾರಿಗರಿದೆಂಬ ಕರಿಚರ್ಮ ತ್ರಿಶೂಲ ನೀಲತೇಜಿಯನೇರಿದ"[೩೩]

ದಿಗ್ಗಿಯ ಆರೂಢ ಸಂಗಮನಾಥನು ಕೊಡೇಕಲ್ ಬಸವನಿಗೆ ಹಸ್ತಮಸ್ತಕೆ ಮಾಡಿ ಆತನ ಅಂತರಂಗಕ್ಕೆ ಆರೂಢವನ್ನು ಅಳವಡಿಸುತ್ತ, ಬಾಹ್ಯವಾಗಿ ಮುಸ್ಲಿಂ ವೇಷವನ್ನು ತೊಡಿಸಿ ಮಹಮ್ಮದನ ಅವತಾರವನ್ನು ಹೊಂದಿದ್ದನ್ನು ನೋಡಿದರೆ ೧೫ನೇ ಶತಮಾನದಲ್ಲಿ ಹಿಂದೂ-ಮುಸ್ಲಿಂ ಮಧ್ಯೆ ನಡೆದ ಧರ್ಮಗಳ ತಿಕ್ಕಾಟದಲ್ಲಿ ಪರಸ್ಪರ ಐಕ್ಯತೆಯ ಮನೋಭಾವನೆಯನ್ನು ಮೂಡಿಸಿದನೆಂದು ಅರಿಯ ಬಹುದಾಗಿದೆ.

"ಆರೂಢ ಸಂಗಮನಾಥನು ಕೊಡೇಕಲ್ ಬಸವನಿಗೆ 'ಹಸ್ತಮಸ್ತಕ'ದ ದೀಕ್ಷೆಯನ್ನು ನೀಡುವ ಮೂಲಕ ಶಿಷ್ಯನನ್ನಾಗಿ ಮಾಡಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ ಸಾವಿರ ಯೋಜನೆ ಸಂಚಾರವನ್ನು ಕೈಕೊಂಡು ಕಾಲಜ್ಞಾನವನ್ನು ಸಾರಲು ಹೇಳುತ್ತಾನೆ. ಆಮೇಲೆ ಶಿಷ್ಯನಿಗೆ ಮಾಯದ ಕುದುರೆ, ನಾಲ್ವರು ಸೇವಕನಾದ ಘಟ್ಟಯ್ಯ, ಬೆಟ್ಟಯ್ಯ, ಗಡಚಣ್ಣ, ಮಿಡಚಣ್ಣರನ್ನು ಒಪ್ಪಿಸುತ್ತಾನೆ. ಅಂದದ್ದು ಆಗುವ ನುಡಿ ಸಿದ್ಧಿಯನ್ನು ನೀಡಿ ಮೈಮೇಲೆ ಆರೂಢ ವೇಷವಾದ ಚರ್ಮಾಂಬರವನ್ನು ತೊಡಿಸುತ್ತಾನೆ.[೩೪]

ಲೋಕ ಕಲ್ಯಾಣಕ್ಕೆ ಬಸವಣ್ಣನವರನ್ನು ಸಂಚಾರ ಕೈಗೊಳ್ಳಲು ತಿಳಿಸಿ ತಾವು ಕೂಡಾ ಸಾಗಿದರು. ಶಹಾಪೂರ ತಾಲೂಕಿನ ಹಳೆಯ ಸಗರ ಇಲ್ಲವೆ ದಿಗ್ಗಿ, ಸುರಪುರ ತಾಲೂಕಿನ ಹೆಬ್ಬಾಳದ ಪರಮಾನಂದನ ಗುಡ್ಡ ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನ ಜಲದುರ್ಗ ಇವೆಲ್ಲಡೆಗೆ ದಿಗ್ಗಿ ಸಂಗಮನಾಥನ ಕುರುಹುಗಳಿವೆ. ಆರೂಢ ಸಂಗಮನಾಥನು ಸಾಹಿತ್ಯ ರಚನೆ ಮಾಡಿದ ಹಾಗೆ ಕಂಡುಬರುವುದಿಲ್ಲ.

ಕೊಡೇಕಲ್ ಬಸವಣ್ಣನವರು ಕಾಲಜ್ಞಾನ ಸಾಹಿತ್ಯದಲ್ಲಿ ದಿಗ್ಗಿ ಸಂಗಮನಾಥನ ವ್ಯಕ್ತಿತ್ವವನ್ನು ತನ್ನ ವಚನಗಳಲ್ಲಿ ಕೀರ್ತಿಸುತ್ತಾನೆ.

"ಒಡನಾಡಿ ಬಂದನು ಒಡೆಯ ಸಂಗಮನಾಥನು
ನಡೆವ ಸರ್ಪನ ಹೆಡೆಯೊಳಗಣ ಪದ್ಮದಂತೆ
ಕೇಳು ಸದ್ಗುರು ಸಂಗನಾಳು ತೆತ್ತಿಸಕೋಟಿ ದೈವದ
ಮೇಳೈಸಿ ಗಗನದಿಂದಲಿ ಧಾಳಿಯಳಿಯಿತೋ
ನರಬಣಮಿಗಳು ಆದವು ಆಗ
ಗುರು ಸಂಗಮೇಶ್ವರ ಮರ್ತ್ಯಕಿಳಿದನು
ಸ್ವರವೆತ್ತಿ ತೋರುತಿವೆ"[೩೫]

ಕೊಡೇಕಲ್ಲ ಬಸವಣ್ಣನ ಕಾಲಜ್ಞಾನ ಸಾಹಿತ್ಯದಲ್ಲಿ ಬಸವಣ್ಣನ ಉಗಮದಿಂದ ವಿಕಾಸದವರೆಗೂ ಬೆನ್ನೆಲುಬಾಗಿ ಸಂಗಮನಾಥರು ಇದ್ದರೆಂದು ವಚನವಾಕ್ಯಗಳಲ್ಲಿ ಹೇಳಿಕೊಂಡಿದ್ದಾನೆ. ಈ ಪರಂಪರೆಯ ಕ್ರಿಯಾಶೀಲ ವ್ಯಕ್ತಿ ಸಂಗಮನಾಥ ಎಂಬುದನ್ನು ಕಾಣಬಹುದು.

೧೫ನೇ ಶತಮಾನದ ಧರ್ಮಗಳ ತಿಕ್ಕಾಟದಲ್ಲಿ ವ್ಯಕ್ತಿ-ವ್ಯಕ್ತಿಗಳ ಮಧ್ಯೆ ದ್ವೇಷ, ಅಸೂಯೆ, ವೈಷಮ್ಯ ಭಯಕ್ಕೆ ಒಳಗಾಗುವಂತಹ ಆಘಾತಕಾರಿ ಘಟನೆಗಳು ನಿರಂತರವಾಗಿ ಸಂಭವಿಸಿದವು. ಆಗ ಜನತೆಯ ಬದುಕು ಅಧೋಗತಿಗಿಳಿಯಿತು. ಜನ ಆಪತ್ತಿಗೆ ಒಳಗಾದರು. ಜನತೆಯ ದೇಹ ಮನಸ್ಸುಗಳ ಸ್ವಾಸ್ಥ್ಯವನ್ನು ಕಾಪಾಡುವುದು ಅಗತ್ಯವಾಗಿತ್ತು. ಆಗ ಆರೂಢ ಸಂಗಮನಾಥನು ಕೊಡೇಕಲ್ ಬಸವಣ್ಣನವರೊಂದಿಗೆ ನಿರ್ವಹಿಸಿದನೆಂದು ತಿಳಿದುಬರುತ್ತದೆ.

ಆರೂಢ ಸಂಗಮನಾಥನು ಬಸವಣ್ಣನವರ ಕೊಡುಗೆಯಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತಾನೆ. ಚೇತನ ಸ್ವರೂಪಿಯೂ, ಪ್ರಚೋದಕನಾದ ಸಂಗಮನಾಥ ಚಾರಿತ್ರಿಕ ಅಂಶಗಳು ಸ್ಪಷ್ಟವಾಗಿ ಕಾಣದೆ ಕಣ್ಮರೆಯಾಗಿ ಹೋಗಿವೆ.

**ಕೊನೆಯಟಿಪ್ಪಣಿಗಳು**


೧. ಅಮರಕಲ್ಯಾಣ, ಡಾ. ಶಿವಾನಂದ ವಿರಕ್ತಮಠ, ಪ್ರ.ಪು. ೨-೩

೨. ಅದೇ, ಪುಟ ೪

೩. ನಂದಿಯಾಗಮಲೀಲೆ (ಸಂ) ಆಯ್.ಜೆ.ಕೊಡೇಕಲ್ಮಠ, ಪುಟ ೪

೪. ನಿರುಪಾಧಿ ಅಭಿನಂದನಗ್ರಂಥ (ಸಂ) ಡಾ. ಅಶೋಕ ನರೋಡೆ, ಡಾ. ವ್ಹಿ.ಎಸ್.ಕಟಗಿಹಳ್ಳಿಮಠ, ಪುಟ ೩೯೩

೫. ಅದೇ, ಪುಟ ೩೯೩

೬. ಅಮರಕಲ್ಯಾಣ, ಡಾ. ಶಿವಾನಂದ ವಿರಕ್ತಮಠ, ಪುಟ ೮೭

೭. ನಿರುಪಾಧಿ ಅಭಿನಂದನ ಗ್ರಂಥ (ಸಂ) ಡಾ. ಅಶೋಕ ನರೋಡೆ, ಡಾ. ವ್ಹಿ.ಎಸ್.ಕಡಗಿಹಳ್ಳಿಮಠ, ಪುಟ ೧೯೪

೮. ಗುಂಡಬಸವೇಶ್ವರ (ಸಂ) ಡಾ. ಎಂ.ಎಂ.ಕಲಬುರ್ಗಿ ಸಂಗಪ್ಪಯ್ಯಸ್ವಾಮಿ, ಪ್ರಸ್ತಾವನೆ, ಪುಟ ೧

೯. ವಚನ ಸ್ವರವಚನ, (ಸಂ) ಡಾ. ಶಿವಾನಂದ ವಿರಕ್ತಮಠ, ಪುಟ ೪೩

೧೦. ಅದೇ, ಪುಟ ೪೯

೧೧. ಅದೇ ಪುಟ ೪೧೧

೧೨. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ, ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೮೯

೧೩. ಅದೇ, ಪುಟ ೯೯

೧೪. ನಂದಿಯಾಗಮಲೀಲೆ (ಸಂ) ಆಯ್.ಜ.ಕೊಡೇಕಲ್‌ಮಠ, ಪುಟ ೧೮೧

೧೫. ಅದೇ, ಪುಟ ೭೨

೧೬. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ, ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೮೮

೧೭. ಅಮರಕಲ್ಯಾಣ, ಡಾ. ಶಿವಾನಂದ ವಿರಕ್ತಮಠ, ಪುಟ ೩೬

೧೮. ವಚನ ವಾಕ್ಯ (ಸಂ) ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೮

೧೯. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ, ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೮೯

೨೦. ಅದೇ, ಪುಟ ೯೦

೨೧. ಅದೇ, ಪುಟ ೯೦

೨೨. ಕೊಡೇಕಲ್ ವಚನವಾಕ್ಯ, (ಸಂ) ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೪೯೫

೨೩. ಅದೇ, ಪುಟ ೫

೨೪. ಅದೇ, ಪುಟ ೩

೨೫. ಅದೇ, ಪುಟ ೭

೨೬. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ಮಠ, ಪುಟ ೧೭೮

೨೭. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ, ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೯೪

೨೮. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ಮಠ, ಪುಟ ೧೭೭

೨೯. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ, ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೯೨-೯೩

೩೦. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ಮಠ, ಪುಟ ೧೭೯

೩೧. ಅಮರಕಲ್ಯಾಣ, ಡಾ. ಶಿವಾನಂದ ವಿರಕ್ತಮಠ, ಪುಟ ೩೯

೩೨. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ಮಠ, ಪುಟ ೧೭೯

೩೩. ಕೊಡೇಕಲ್ ವಚನ ವಾಕ್ಯ, (ಸಂ) ಡಾ. ಬಸವಲಿಂಗ ಸೊಪ್ಪಿನಮಠ, ಪುಟ ೩೯

೩೪. ಅಮರಕಲ್ಯಾಣ, ಡಾ. ಶಿವಾನಂದ ವಿರಕ್ತಮಠ, ಪುಟ ೩೯

೩೫. ವಚನ-ಸ್ವರವಚನ (ಸಂ) ಡಾ. ಶಿವಾನಂದ ವಿರಕ್ತಮಠ, ಪುಟ ೧೬೦, ೧೧೯, ೧೩೪, ೧೩೬

## ಅಧ್ಯಾಯ ೬

# ಅಮರಕಲ್ಯಾಣವಾಗಿ ದಿಗ್ಗಿ

'ಕಲ್ಯಾಣ' ಎಂಬುದು ಕರ್ನಾಟಕ ಸಂದರ್ಭದಲ್ಲಿ ಒಂದು ಅರ್ಥಪೂರ್ಣಸ್ಥಳ. ಈ ಸ್ಥಳ ಮಹಾತ್ಮೆಗೆ ಚಾರಿತ್ರಿಕ ಮಹತ್ವವಿದೆ. ಕನ್ನಡ ಕಾವ್ಯ ಪರಂಪರೆಗೆ ವಚನ ಸಾಹಿತ್ಯವೆಂಬ ವಿನೂತನ ಪ್ರಕಾರವನ್ನು ಜೋಡಿಸಿದ ಕೀರ್ತಿ ಇದಕ್ಕೆ ಸಲ್ಲುತ್ತದೆ. ವ್ಯಕ್ತಿ ನೆಲೆಯಲ್ಲಿ ಹುಟ್ಟಿದ ಸಾಹಿತ್ಯವನ್ನು ಸಮಷ್ಟಿನಲೆಯಲ್ಲಿ ನಿರ್ಮಾಣವಾಗುವಂತೆ ಮಾಡಿ ಅದಕ್ಕೆ ಸಾಮೂಹಿಕ ಹಿತಬದ್ಧತೆಯನ್ನು ತಂದುಕೊಟ್ಟವರು ಕಲ್ಯಾಣದ ಶರಣರು. ಇಂತಹ ಕಲ್ಯಾಣವನ್ನು ಕುರಿತು ನಮ್ಮ ಪ್ರಾಚೀನ ಕವಿಗಳು, ಸಮಕಾಲಿನ ವಚನಕಾರರು, ಕಾಲಜ್ಞಾನಿಗಳು, ಜನಪದರು, ಮನದುಂಬಿ ಬಣ್ಣಿಸಿದ್ದಾರೆ. ಒಂದರ್ಥದಲ್ಲಿ ಕಲ್ಯಾಣ ಕನ್ನಡಿಗರ ವೈಚಾರಿಕ ಆಲೋಚನೆಗೆ ನಾಂದಿಹಾಡಿತೆನ್ನಬೇಕು. ಇಂತಹ ಕಲ್ಯಾಣವನ್ನು ಕುರಿತು ನಮ್ಮಲ್ಲಿ ಅನೇಕ ಅಧ್ಯಯನಗಳು ನಡೆದಿವೆ. ವಿಶೇಷವಾಗಿ ಡಾ. ಎಂ.ಎಂ.ಕಲಬುರ್ಗಿಯಂತಹವರು 'ಕಟ್ಟುತ್ತ ಬಂದ ಕಲ್ಯಾಣಗಳು' ಎಂಬ ವಿಶಿಷ್ಟ ಲೇಖನದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ.

"ಕಲ್ಯಾಣ ಕಟ್ಟುವ ಕೆಲಸವನ್ನು ಸಮಯಕಲ್ಯಾಣ, ವಿಜಯಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ ಹೆಸರುಗಳಿಂದ ಬೇರೆ ಬೇರೆ ಕಾಲದಲ್ಲಿ ಪೂರ್ಣಗೊಳಿಸಲು ಮಾಡಿದ ನಾಲ್ಕು ಪ್ರಯತ್ನಗಳು ಇತಿಹಾಸದಲ್ಲಿ ಕಾಣಬಹುದಾಗಿದೆ. ಬಸವಣ್ಣ ಕಟ್ಟಬೇಕೆಂದುದು ಬದ್ಧ ಸಮಾಜವಲ್ಲ, ಮುಕ್ತ ಸಮಾಜವನ್ನು. ವರ್ಗ ವರ್ಣ ಲಿಂಗಭೇದರಹಿತ ಸಮಾಜವನ್ನು. ಇಂಥ ಸಮಾಜವೇ 'ಸಮಯ'. ಈ ಚಟುವಟಿಕೆಗೆ ೧೨ನೇ ಶತಮಾನದಲ್ಲಿ ನೆಲೆಯಾದ ಕಲ್ಯಾಣ ಪಟ್ಟಣವೇ 'ಸಮಯಕಲ್ಯಾಣ'ವಾಗಿದೆ. ಕಲ್ಯಾಣ ಕಟ್ಟುವ ಕೆಲಸ ಅರ್ಧಕ್ಕೆ ನಿಂತಿತು ಅಥವಾ ಕಟ್ಟಿದ ಕಲ್ಯಾಣ ಕೆಟ್ಟುಹೋಯಿತು. ಎರಡನೆಯ ಸಲವು ಕಟ್ಟಿದ ಕಲ್ಯಾಣವಾದ ವಿಜಯಕಲ್ಯಾಣವು ಹೋಯಿತು."[೧]

೧೬ನೇ ಶತಮಾನದಲ್ಲಿ ದಿಗ್ಗಿ ಸಂಗಮನಾಥನು ತಲೆಎತ್ತುತ್ತಾನೆ. ವಿಜಯಕಲ್ಯಾಣ ಕೆಟ್ಟು ಹೋದುದನ್ನು ಕಣ್ಣಾರೆ ಕಂಡಿದ್ದನು ಅದರಿಂದ ಪ್ರೇರಿತನಾಗಿ ಕೆಟ್ಟುಹೋದ ಕಲ್ಯಾಣವನ್ನು ಮೂರನೆಯ

ಸಲವು 'ಅಮರಕಲ್ಯಾಣ'ವನ್ನು ದಿಗ್ಗಿಯಲ್ಲಿ ಕಟ್ಟುತ್ತಾನೆ. ಇಷ್ಟಲಿಂಗವನ್ನು ತೊರೆದು ಪ್ರಾಣಲಿಂಗವನ್ನು ಆರಾಧಿಸುವದನ್ನು ಅನುಷ್ಠಾನಕ್ಕೆ ತರುವನು.

"ಕನ್ನಡನಾಡಿನ ಸಾಹಿತ್ಯ ಮತ್ತು ಸಮಾಜಗಳನ್ನು ಕೈ ಹಿಡಿದು ನಡೆಸಿದ ಎರಡು ಬಲಿಷ್ಠ ಶಕ್ತಿಗಳೆಂದರೆ ಪ್ರಭುತ್ವ ಮತ್ತು ಧರ್ಮ. ಧರ್ಮವು ಪ್ರಭುತ್ವ ಕೃಪಾಛತ್ರವಿಲ್ಲದೆ ಚೆನ್ನಾಗಿ ಅರಳಲು ಅಸಮರ್ಥವಾದುದರಿಂದ ಧರ್ಮಕ್ಕಿಂತ ರಾಜಕೀಯ ಮತ್ತು ರಾಜಕೀಯ ಸ್ಥಿತ್ಯಂತರಗಳು ಈ ನಾಡಿನ ಹಣೆಬರಹವನ್ನು ನಿರ್ಧರಿಸುವ ಪ್ರಬಲ ಶಕ್ತಿಗಳಾಗಿ ನಿಂತವು."[೨]

೧೨ನೇ ಶತಮಾನದಲ್ಲಿ ಕಲ್ಯಾಣವು ಚಾಲುಕ್ಯರ ರಾಜಧಾನಿ ಸ್ಥಳವಾಗಿ ಪ್ರಸಿದ್ಧಿಯಾಗಿರುವುದರ ಜೊತೆಗೆ ಶರಣರ ಚಳುವಳಿಯ ಸಾಂಸ್ಕೃತಿಕ ಅಸ್ತಿತ್ವವನ್ನು ಹೊಂದಿದೆ. ವಚನಕಾರರು 'ಕಲ್ಯಾಣ' ನಗರವನ್ನು ಚಳುವಳಿಯ ನೆಲೆಯನ್ನಾಗಿ ಮಾಡಿಕೊಂಡರು ಅದೇ ಸಮಯಕಲ್ಯಾಣ. ತಮ್ಮ ನವೀನ ಆಶಯಗಳನ್ನು ವಚನಗಳಲ್ಲಿ ಮೂಡಿಸಿದರು. ಈ ಸಮೂಹ ಚಟುವಟಿಕೆಗಳನ್ನು ಕೈಗೊಳ್ಳಲು ತೊಂದರೆ ಉಂಟಾದರೂ ನಿಂತು ಹೋಗಲಿಲ್ಲ.

ಈ 'ಕಲ್ಯಾಣ'ವು ಒಂದು ಪರಂಪರೆಯ ಅರ್ಥವನ್ನು ಪಡೆದುಕೊಂಡು ಮುಂದಿನ ಚರಿತ್ರೆಯ ಗತಿಯಲ್ಲಿ ಎದುರಾದ ಭಕ್ತಿ ಹಾಗೂ ಅನುಭಾವ ಧಾರೆಗಳಿಗೆ ಒಂದು ಶಕ್ತಿಯಾಗಿ ತನ್ನ ಪ್ರಭಾವವನ್ನು ಉಂಟುಮಾಡಿತು. ಕಲ್ಯಾಣವು ಹೀಗೆ ಅಂತರ್ ನೆಲೆಯಾಗಿ ಉಳಿದುಕೊಂಡ ಕಾರಣವಾಗಿ ಕನ್ನಡದಲ್ಲಿ ಶರಣರ ಕಥಾನಕಗಳು, ವಚನಗಳ ಸಂಕಲನಗಳು, ಹೊಸ ಪರಿಷ್ಕಾರಗಳು ಮೂಡಿಬಂದವು. ಈ ಎಲ್ಲಾ ಸೃಜನಶೀಲ ಚಟುವಟಿಕೆಗಳು ಕಲ್ಯಾಣದೊಟ್ಟಿಗೆ ತಮ್ಮ ಸಂವಾದಗಳನ್ನು ಮಾಡುತ್ತಲೇ ಬಂದಿವೆ. ತಮ್ಮ ಸೃಷ್ಟಿಶೀಲ ಪ್ರಕ್ರಿಯೆಗಳಿಗೂ ಕೂಡಾ 'ಕಲ್ಯಾಣ'ವೆಂಬ ಹೆಸರನ್ನು ಕೊಟ್ಟ ಮರು ಕಲ್ಯಾಣಗಳು ಸೃಷ್ಟಿಯಾಗಿವೆ. ಹೀಗೆ ಸೃಷ್ಟಿಯಾದ ಕೆಲವು ಕಲ್ಯಾಣ ಪರಂಪರೆಗಳಲ್ಲಿ ಪ್ರಸ್ತುತ ಅಮರಕಲ್ಯಾಣವು ಸೇರಿದಂತೆ ಇತರ ಕಲ್ಯಾಣ ಪರಂಪರೆಗಳು ಉಲ್ಲೇಖಾರ್ಹವಾಗಿವೆ.[೩] ಅವೇ ೧. ಸಮಯಕಲ್ಯಾಣ ೨. ವಿಜಯಕಲ್ಯಾಣ ೩. ಅಮರಕಲ್ಯಾಣ ೪. ಧರ್ಮಕಲ್ಯಾಣ ೫. ಕಡೆಯಕಲ್ಯಾಣ.

ಕಲ್ಯಾಣ ಪರಂಪರೆಯಲ್ಲಿ ಮರು ಸೃಷ್ಟಿಯ ಕಲ್ಯಾಣಗಳಲ್ಲಿ ವಿಜಯಕಲ್ಯಾಣವೇ ಮೊದಲಿನದು. ಪ್ರೌಢದೇವರಾಯನ ಕಾಲದಲ್ಲಿ ನಡೆದ ವಚನಗಳ ಸಂಕಲನ, ಟೀಕು, ವ್ಯಾಖ್ಯಾನ, ಸ್ಥಲಕಟ್ಟು ನಿಯೋಜಿತ ಸಂಪಾದನೆ, ತಾತ್ವಿಕ ವಿಶ್ಲೇಷಣೆ, ವಿವೇಚನೆ ಮುಂತಾದ ಚಟುವಟಿಕೆಗಳ ಪ್ರಕ್ರಿಯೆಯನ್ನು 'ವಿಜಯಕಲ್ಯಾಣ'ವೆಂದು ಕರೆಯಲಾಗಿದೆ.[೪]

ಕಲ್ಯಾಣ ಪರಂಪರೆಯ ಎರಡನೆಯ ಕಲ್ಯಾಣ ವಿಜಯಕಲ್ಯಾಣ. 'ಶಿವತತ್ವ ಚಿಂತಾಮಣಿ'ಯ ಲಕ್ಕಣ್ಣ ದಂಡೇಶನ ಅಭಿಪ್ರಾಯದಂತೆ, ಪ್ರೌಢದೇವರಾಯನ ಕಾಲದ ಹಂಪೆ ಅರ್ಥಾತ್ ವಿಜಯನಗರವೇ

ಆ ವಿಜಯಕಲ್ಯಾಣ. ಕ್ರಾಂತಿಕಲ್ಯಾಣದೊಂದಿಗೆ ಚೆಲ್ಲಾಪಿಲ್ಲಿಯಾದ ಶರಣ ಸಮುದಾಯ ಕಲ್ಯಾಣೋಪಾದಿಯಲ್ಲಿ ಪುನರ್‌ಸಂಘಟಿತವಾದದ್ದು ಶರಣ ಸಾಹಿತ್ಯ ರಚನೆಗೆ, ಪುನರ್ ವಿವೇಚನೆಗೆ ತೊಡಗಿದ್ದು ಇದೇ ಪ್ರೌಢದೇವರಾಯನ ಕಾಲದಲ್ಲಿ ಒಬ್ಬ ದೊರೆ ಕೊಟ್ಟ ಪ್ರೋತ್ಸಾಹ ಮತ್ತು ಮರ್ಯಾದೆಗಳು ವೀರಶೈವಕ್ಕೆ 'ವಿಜಯ'ವನ್ನು ತಂದಿತ್ತುವಲ್ಲದೆ, ಅದು ನೆಲೆಸಿದ ವಿಜಯನಗರವನ್ನು 'ವಿಜಯ ಕಲ್ಯಾಣ'ವಾಗಿಸಿದವು."[೬]

ವಿಜಯಕಲ್ಯಾಣದ ಮುಂದಿನ ಹಂತವೇ ಅಮರಕಲ್ಯಾಣ. ಅಮರಕಲ್ಯಾಣ ಪರಂಪರೆಯಲ್ಲಿರುವ ಶರಣರೆಂದರೆ ದಿಗ್ಗಿ ಸಂಗಮನಾಥ, ತಿಪ್ಪಣಯ್ಯ, ಗುರುಗುಂಡ ಬಸವೇಶ್ವರ, ಕೊಡೇಕಲ್ಲ ಬಸವಣ್ಣನವರು ಎಂಬ ವಿಚಾರ ಗುರುಗುಂಡ ಬಸವೇಶ್ವರ ಚರಿತ್ರೆಯ ಮತ್ತು ನಂದಿಯಾಗಮಲೀಲೆ ಕಾವ್ಯಗಳಿಂದ ತಿಳಿದುಬರುತ್ತದೆ.

ಗುಂಡ ಬಸವೇಶ್ವರ ಪುರಾಣದಲ್ಲಿ ತಿಪ್ಪಣಯ್ಯನು ಬಾಲಕ ಗುಂಡ ಬಸವಣ್ಣನಿಗೆ-

ಕೇಳು ನೀ ಬಸವಣ್ಣ ಹೇಳುವ ಮಾತನು
ಭಾಳಲೋಚನ ಭಕ್ತನೊಬ್ಬ
ಹಳೆಯ ಸಗರದ ಹೊರಗೆ ಮಠಕಟ್ಟಿ ತಾ
ಇಳೆಯಾಳ ಅಮರಕಲ್ಯಾಣನೆನಿಸಿ[೭]

ಹಳೆಯ ಸಗರವೆಂದರೆ ಇಂದು ತಾಲೂಕು ಸ್ಥಳವಾದ ಶಹಾಪೂರ ಗ್ರಾಮವಾಗಿದೆ. ಇಲ್ಲಿ ಬರುವ ದಿಗ್ಗಿಯ ಹೊರಗೆ ಮಠಕಟ್ಟಿ ಅದನ್ನು ಅಮರಕಲ್ಯಾಣ ಎಂದು ಹೆಸರಿಟ್ಟು ಅಮರಗೊಳಿಸಿದನು.

ಬಂದು ಸಗರದಲಿ ನಂದಿಯು
ನಿಂದು ಕೇಳಲು ಬಸವನೊಡೆಯರು
ಸಂದು ಹೋದ ಮೇಲೆ ಅವರಸುತರು ಇರಲಾಗಿ
ಅಂದು ದರುಶನವಾಗಿ ಸತಿ ಎ
ಲ್ಲಿಂದ ಬಂದಿರೆನುತಲಿ ಕೇಳಲು
ಬಂದವರು ಆರೆಂದು ಅರಿವುದು ಶರಣಸಂತತಿಯ[೮]

ವಿಜಯನಗರದಲ್ಲಿ ಸಂಗಮನಾಥನ ದರ್ಶನವನ್ನು ಪಡೆದ ಕೊಡೇಕಲ್ ಬಸವಣ್ಣ ಸಂಚಾರಮಾಡುತ್ತ ಅಮರಕಲ್ಯಾಣ ಎಂಬ ಕೀರ್ತಿಯನ್ನು ಪಡೆದ ಹಳೆಯ ಸಗರವಾದ ದಿಗ್ಗಿ ಪ್ರದೇಶಕ್ಕೆ ಬರುತ್ತಾನೆ. ಆ ಹೊತ್ತಿಗೆ ಸಂಗಮನಾಥ 'ಸಂದು ಹೋಗಿದ್ದ' (ಐಕ್ಯನಾಗಿದ್ದ) ಆಗ ಸಂಗಮನಾಥನ ಗದ್ದುಗೆಗೆ ಹೋಗಿ ದರ್ಶನವನ್ನು ಪಡೆದುಕೊಂಡು ಮತ್ತೆ ಸಂಚರಿಸುತ್ತ ನಾಗಾವಿಗೆ ಬರುತ್ತಾನೆ.

ನಾಗಾವಿಯೆಂದೆಂಬ ಗ್ರಾಮಕೆ
ಬ್ಯಾಗಬಂದು ನಂದಿ ಕೊಳನಲ್ಲಿ
ಜಾಗ ವಿಸ್ತರ ನೋಡಿ ಇಳಿದು ಮೂರ್ತಿ ಮಾಡಿದನು
ಸಾಗಿ ಗುಂಡ ಬಸವಪ್ಪನಲ್ಲಿಗೆ
ಆಗ ಭೀಕ್ಷಾ ಶಬ್ದ ಎನಲು
ಈಗೆ ಮಾಡಿ ಇಲ್ಲವೆಂದರೆ ಇಹುದು ಎಂದೆನುತಾ[೯]

ನಾಗಾವಿಗೆ ಬಂದ ಬಸವಣ್ಣ ಅಲ್ಲಿಯ ಗುಂಡಬಸವಪ್ಪನ ಮನೆಗೆ ಹೋಗಿ ಅವರ ಹೆಂಡತಿಯಲ್ಲಿ ಭಿಕ್ಷೆ ಬೇಡುತ್ತಾನೆ. ನೀಡಲು ಸಿದ್ಧ ಅಡಿಗೆ ಇಲ್ಲವೆಂದು ಹೇಳುವಳು. ಶಿವನು ನೀಡಿದ ಬಹುದಿನದ ಕಜ್ಜಾಯ ನಿಮ್ಮಲ್ಲಿದೆ ಎಂದು ಪಡೆದುಕೊಂಡು ನಿರ್ಗಮಿಸಿದನು.

ನೆಡುವೆ ಭಾಜನದೊಟ್ಟಿಯಲ್ಲಿ
ಮಡಗಿದೆ ಬಹುದಿನದ ಕಜ್ಜಾಯ
ಒಡನೆ ನೀಡಲು ಹಸಿವು ತೃಷಿಯು ಆಗುವುದೆಂದು
ಹಿಡಿದು ನೀಡಲು ತೆಗೆದುಕೊಳುತಲಿ
ನಡೆದನಾಗಾ ತನ್ನ ಸ್ಥಲಕೆ
ಬಿಡದೆ ಎಯ್ದು ಈರಯ್ಯ ಮಾತೆಯ ಕೇಳಿದನು ಆಗ್[೧೦]

ಈರಪ್ಪಯ್ಯನು ಆಗಮಿಸಿ ತಾಯಿಯಿಂದ ಎಲ್ಲವನ್ನು ಕೇಳಿಕೊಂಡು ಕೊಡೇಕಲ್ ಬಸವಣ್ಣನಿಗೆ ಹುಡುಕಿ ಕಜ್ಜಾಯ ಪಡೆದು ಶಿಷ್ಯನಾಗುತ್ತಾನೆ. ಶಿಷ್ಯನಾದ ಈರಪ್ಪಯ್ಯನೂ ಹಲವಾರು ಪವಾಡ ಮಾಡುತ್ತಾರೆ. ಕತ್ತೆಯ ಪವಾಡಮಾಡಿ ಮೆರೆಯುತ್ತಾನೆ. ನಂತರ ಕೊಡೇಕಲ್ ಬಸವಣ್ಣನಿಗೆ ಇಕ್ಕಳಿಕೆ ಗ್ರಾಮಕ್ಕೆ ಬಂದು ಸಂಚರಿಸುತ್ತ ಕೊಡೇಕಲ್ಲಿಗೆ ಬಂದು ಆ ಪರಂಪರೆಯ ಸ್ಥಾಪಕನಾಗುತ್ತಾನೆ.

ಇದೆಲ್ಲವನ್ನು ನೋಡಿದರೆ ಕೊಡೇಕಲ್ಲ ಬಸವಣ್ಣ ಹಳೆಯ ಸಗರಕ್ಕೆ (ಮತ್ತು ನೆರೆಯ ದಿಗ್ಗಿ ಪ್ರದೇಶಕ್ಕೆ) ಬಂದ ಸಂದರ್ಭದಲ್ಲಿ ಸಂಗಮನಾಥ ಲಿಂಗೈಕ್ಯನಾಗಿದ್ದನೆಂದು, ಬಳಿಕ ನಾಗಾವಿಗೆ ಬಂದ ಸಂದರ್ಭದಲ್ಲಿ ತಾಯಿ ಮತ್ತು ಮಗ ಈರಪ್ಪಯ್ಯನ ಪ್ರಸ್ತಾಪ ಮಾತ್ರ ಬರುವುದರಿಂದ ಆಗ ಗುಂಡ ಬಸವಣ್ಣನೂ ಬದುಕಿರಲಿಲ್ಲವೆಂದು ಸ್ಪಷ್ಟವಾಗುತ್ತದೆ. ಇದರಿಂದ ದಿಗ್ಗಿಯ ಸಂಗಮನಾಥ ಹಿರಿಯ, ಇವನಿಗಿಂತ ಗುಂಡ ಬಸವಣ್ಣ ಕಿರಿಯ, ಇವನಿಗಿಂತ ಕೊಡೇಕಲ್ಲ ಬಸವಣ್ಣ ಕಿರಿಯನೆಂದು ಸ್ಪಷ್ಟವಾಗುತ್ತದೆ.[೧೧]

ಇನ್ನು ಒಂದು ಮುಖ್ಯವಾದ ಸಂಗತಿಯೆಂದರೆ ಮೊದಲು ಅಸ್ತಿತ್ವಕ್ಕೆ ಬಂದುದು ದಿಗ್ಗಿ ಪ್ರದೇಶದ 'ಅಮರಕಲ್ಯಾಣ' ಆಮೇಲೆ ನಾಗಾವಿ ಪ್ರದೇಶದ 'ಧರ್ಮಕಲ್ಯಾಣ' ಕೊನೆಗೆ ಕೊಡೇಕಲ್ಲ ಪ್ರದೇಶದ

'ಕಡೆಯ ಕಲ್ಯಾಣ'ವೆಂದು ಮೇಲಿನ ವಿವರಣೆ ಸ್ಪಷ್ಟಪಡಿಸುತ್ತವೆ. ಅದಕ್ಕಾಗಿಯೇ ಈ ಸಂಪ್ರದಾಯದಲ್ಲಿ 'ಕೊಡೆಯ ಕಲ್ಲೆಂಬುದು ಕಡೆಯಕಲ್ಯಾಣ'ವೆಂದು ಪದೇ ಪದೇ ಕೊಂಡಾಡಲ್ಪಟ್ಟಿದೆ. ಈ ಮೂರು ಕಲ್ಯಾಣಗಳಿಗೆ ಆದರ್ಶವಾದುದು ಬಸವಕಲ್ಯಾಣ[೧೨].

ಕಲ್ಯಾಣ ನಾಲ್ಕರೊಳಗೆ ಬಂದ ಶರಣರ
ಸೊಲ್ಲ ಕೇಳದಾಯಿತು ಲೋಕ
ಬಲ್ಲದ ದೀಕ್ಷೆ ಶಿಕ್ಷೆಯ ಕೊಂಡುಬಂದು ಹೊಸ
ಕಲ್ಯಾಣವನು ನಿರ್ಮಿಸಿಹನು[೧೩]

ಎಂಬ ಪದ್ಯದಲ್ಲಿ ಬಸವಕಲ್ಯಾಣ, ಅಮರಕಲ್ಯಾಣ, ಧರ್ಮಕಲ್ಯಾಣ, ಕಡೆಯಕಲ್ಯಾಣಗಳೆಂಬ ನಾಲ್ಕು ಕಲ್ಯಾಣಗಳನ್ನೇ ಕವಿಯು ಸೂಚಿಸುತ್ತಿರಬೇಕು. ಮುಂದಿನ ದಿನಗಳಲ್ಲಿ ಸಮಯಕಲ್ಯಾಣವನ್ನು ಸ್ಥಾಪಿಸಲು ಶರಣರು ಹುಟ್ಟಿಬರುವರೆಂಬ ಸೂಚನೆಯೂ ಇದ್ದು ಇದು ಈ 'ಧರ್ಮಕಲ್ಯಾಣ'ದ ತರುವಾಯದ 'ಕಡೆಯಕಲ್ಯಾಣ'ವನ್ನೋ ಇನ್ನು ಭವಿಷ್ಯತ್ತಿನಲ್ಲಿ ಅವಿರ್ಭವಿಸಲಿರುವ ಬೇರೊಂದು ಕಲ್ಯಾಣವನ್ನೋ ಸೂಚಿಸುತ್ತಿರಬೇಕು.[೧೪]

"ಅಂದು ಕಟ್ಟಿದ ತೊಟ್ಟಿಲು, ಇಂದು ತೂಗಲು ಬಂದರು ಜ್ಯೋತಿ ಸಂಗನ ಶರಣರು" ಎಂಬ ಕೊಡೇಕಲ್ಲು ಸಂಪ್ರದಾಯದ ಈ ಪದ್ಯ ಹೀಗೆ ಬಂದವರು 'ಸಂಗನ ಶರಣರು' ಎಂದು ಬಿಡಿಸಿ ಹೇಳುವುದನ್ನು ನೋಡಿದರೆ ಈ ಪರಂಪರೆಯ ಕೇಂದ್ರ ದೈವತಃ ಸಂಗಮನಾಥನೆಂದು ಸ್ಪಷ್ಟವಾಗುತ್ತದೆ.[೧೫]

ಹಳೆಯ ಸಗರದಲ್ಲಿ 'ಅಮರ ಕಲ್ಯಾಣ' ಕಟ್ಟಿದವನು ದಿಗ್ಗಿ ಸಂಗಮನಾಥನೆಂಬುದನ್ನು ಇಲ್ಲಿ ನೆನೆಯಬಹುದು[೧೬] ದಿಗ್ಗಿಯ ಗುಡ್ಡದ ಗವಿಯಲ್ಲಿ 'ಅಮರಕಲ್ಯಾಣ' ಎಂಬ ಗವಿಗಳಿರುವುದನ್ನು ಇವತ್ತೂ ಕಾಣಬಹುದು.

ಕೊಡೇಕಲ್ಲ ಪರಂಪರೆಯನ್ನು 'ಅಮರಕಲ್ಯಾಣ' ಎಂದು ಈಗಾಗಲೇ ಡಾ. ಬಸವಲಿಂಗ ಸೊಪ್ಪಿಮಠರು 'ಕೊಡೇಕಲ್ಲು ಬಸವಣ್ಣ: ಒಂದು ಅಧ್ಯಯನ' ಪ್ರಬಂಧದಲ್ಲಿ ಮತ್ತು ಡಾ. ಶಿವಾನಂದ ವಿರಕ್ತಮಠರ 'ಅಮರಕಲ್ಯಾಣ' ಕೃತಿಯಲ್ಲಿ ಕೊಡೇಕಲ್ಲು ಕಡೆಕಲ್ಯಾಣ, ಕಡಿಯಕಲ್ಯಾಣ ಎಂದು ಕರೆಸಿಕೊಂಡುದು ಔಚಿತ್ಯ ಪೂರ್ಣವಾಗಿದೆ. ಕೊಡೇಕಲ್ಲು ಸಾಹಿತ್ಯ ಉಲ್ಲೇಖಿಸುವ ಮೂರನೆಯ ಹಾಗೂ ಕೊನೆಯ ಕಲ್ಯಾಣವೇ ಅಮರಕಲ್ಯಾಣ. ಕೊಡೇಕಲ್ಲ ಬಸವನ ವಿನೂತನ ಪ್ರಯೋಗ ಈ ಕಲ್ಯಾಣವಾಗಿದೆ ಎಂದು ತಿಳಿಸಿದ್ದಾರೆ. ಹಾಗೆಯೇ ವಿಜಯನಗರದಲ್ಲಿ ಹುಟ್ಟಿ ಬೆಳೆದ ಈ ಬಸವಣ್ಣ ಕೊಡೇಕಲ್ಲಿಗೆ ಬಂದು ನಿಲ್ಲುವಲ್ಲಿ ಘನವಾದ ಉದ್ದೇಶವೊಂದು ಇದ್ದಂತಿದೆ. ಆ ಉದ್ದೇಶವೇ ಕೊಡೆಯಕಲ್ಲು ಪ್ರದೇಶವನ್ನು 'ಅಮರಕಲ್ಯಾಣ'ವಾಗಿ ಪರಿವರ್ತಿಸುವುದಾಗಿದೆ.

ಹಲವು ಕಲ್ಲುಗಳೆಂಬ ನಾಮವು
ಫಲವು ಮುಂದಕೆ ಅಮರಗಣರಿಗೆ
ಮಲಹರನು ತಾ ಬಂದು ನಿಲುವನು ಕಡಿಯ ಕಲ್ಯಾಣಕೆ[೧೬]

ನನ್ನಿಯುಳ್ಳ ದೇವ ನಂದೀಶ ಬಂದಾನೆ
ಬನ್ನಿತಡಬೇಡ ಬಸವನ ಗುತ್ತಿಗೆ
ಕೊಟ್ಟಡಿಯ ಬಿಟ್ಟ ಅಮರಕಲ್ಯಾಣದ
ಬಟ್ಟೆಯಲಿ ಬನ್ನಿ ಭಯವಿಲ್ಲ ನಿಮಗೆ
ಕಾಣಿಸಿತಮರ ಕಲ್ಯಾಣ[೧೭]

ಅರುಹ ಆಗಲೆ ತೋರಿಕೊಟ್ಟನು
ಗುರುಬಸವನು ಇರುವ ಸ್ಥಾನವನು
ಹರಿವ ನದಿಯಾ ಮಧ್ಯದಲ್ಲಿ ದೇವದುರ್ಗದುತ್ತರದಿ
ಇರುವ ಕೊಡೆಯಕಲ್ಲೆಂಬ ಗ್ರಾಮವು
ಧರೆಯ ಈರೇಳ್ಭುವನದೊಡೆಯನು
ಪರಮಗುರುವು ಬಸವರಾಜನು ಇಹನು ತಾನಲ್ಲಿ[೧೮]

ಕೊಡೇಕಲ್ಲ ಸಾಹಿತ್ಯದಲ್ಲಿ ಒಂದು ಕಡೆಗೆ 'ಹಲವು ಕಲ್ಲು' ಗ್ರಾಮವನ್ನು ಅಮರಕಲ್ಯಾಣವೆಂದು ಹೇಳುತ್ತಿದ್ದರೆ, ಇನ್ನೊಂದು ಕಡೆಗೆ ದೇವದುರ್ಗ ಗ್ರಾಮವನ್ನು ಅಮರಕಲ್ಯಾಣವೆಂದು ಹೇಳಿದೆ. ಸಾಲೋಟಗಿ ಡಂಗುರ ಪದಗಳು ಶರಣ ಭೋಗಣ್ಣನ ಊರಾದ ಕೆಂಭಾವಿಗೆ ಹತ್ತಿರದ ಗುತ್ತಿಯನ್ನೇ ಅಮರಕಲ್ಯಾಣವೆಂದು ಹೇಳಿದಂತಿದೆ. ಇದರಿಂದ ಅಮರಕಲ್ಯಾಣವೆಂಬುದು ನಿರ್ದಿಷ್ಟ ಊರಲ್ಲ, ಕೊಡೇಕಲ್ಲ ಗ್ರಾಮವು ಒಳಗೊಂಡಂತೆ ಮೇಲಿನ ಮೂರು ಗ್ರಾಮಗಳನ್ನು ವ್ಯಾಪಿಸಿದ ಒಂದು ಪ್ರದೇಶ ತಿರುಳ್ಗನ್ನಡದ ನಾಡು ಇದ್ದಂತೆ.[೧೯]

ಕೊಡೇಕಲ್ ಬಸವನ ಅಮರಕಲ್ಯಾಣ ವಿಸ್ತಾರ ೪೮ ಯೋಜನವಾಗಿತ್ತು ಎಂಬುದನ್ನು ಲೆಕ್ಕಕ್ಕೆ ತೆಗೆದುಕೊಂಡರೆ, ಹಲವು ಕಲ್-ದೇವದುರ್ಗ-ಗುತ್ತಿ-ಕೊಡೇಕಲ್ಲು ಈ ನಾಲ್ಕು ನೆಲೆಗಳು ದೂರವಿಲ್ಲ ಎಂಬುದನ್ನು ಗಮನಿಸಿದಾಗ ಈ ನಾಲ್ಕು ನೆಲೆಗಳ ಒಟ್ಟು ಪ್ರದೇಶ 'ಅಮರಕಲ್ಯಾಣ'ವೆಂದು ಕರೆಯಲ್ಪಡುತ್ತಿತ್ತು ಎಂಬುದು ಸ್ಥಿರವಾಗುತ್ತದೆ. ಅಲ್ಲದೆ ಗುತ್ತಿಯಿಂದ ಆರಂಭವಾಗುವ ಬೆಟ್ಟದ ಸಾಲುಗಳು ಹಲವು ಕಲ್ಲು, ಕೊಡೇಕಲ್ ದೇವದುರ್ಗ ಅಂದರೆ ಜಲದುರ್ಗದವರೆಗೆ ಅದೇ ಪ್ರಮಾಣದಲ್ಲಿ ಚಾಚಿಕೊಂಡಿರುವುದನ್ನು ನೋಡಿದರೆ ಈ ಬೆಟ್ಟ ಸಾಲುಗಳ ದುರ್ಗಮ ಪ್ರದೇಶದಲ್ಲಿಯೇ ಈ ಬಸವಣ್ಣನ 'ಅಮರಕಲ್ಯಾಣ' ರೂಪುಗೊಂಡಿರಬೇಕು ಎನಿಸುತ್ತದೆ.[೨೦]

ಗುಡ್ಡ-ಬೆಟ್ಟ-ಕಲ್ಲು, ಗಿಡಗಳು ಕೊಡೇಕಲ್ಲ ಬಸವನ ಪರಿಸರವನ್ನು ಚೆನ್ನಾಗಿ ಧ್ವನಿಸುತ್ತಿವೆ. ಈ ಪರಿಸರ ಗುತ್ತಿ-ಹಲವು ಕಲ್ಲು-ದೇವದುರ್ಗಗಳಿಗೆ ಅನ್ವಯಿಸುವುದರಿಂದ ಈ ಮೂರು ಪುರಗಳ ಒಟ್ಟು ಪ್ರದೇಶವೇ ಅಮರಕಲ್ಯಾಣವೆಂದು ನಿರ್ಧರಿಸಬಹುದು.[೨೨]

ಕೊಡೇಕಲ್ಲ ಬಸವಣ್ಣನವರ ನೆಲೆಬೀಡಾಗಿ ಬೆಳಗಿದ ಕೊಡೇಕಲ್. ಕೊಡೇಕಲ್ಲ ಸಾಹಿತ್ಯ ಕೃತಿಗಳಲ್ಲಿ 'ಕಡೇಕಲ್ಯಾಣ' 'ಕಡಿಯಕಲ್ಯಾಣ' ಎಂದು ಕರೆಸಿಕೊಂಡಿರುವುದು ಔಚಿತ್ಯಪೂರ್ಣವಾಗಿದೆ.

ಕೊಡೆಯಕಲ್ಲೆಂಬುದು ಕಡಿಯಕಲ್ಯಾಣವು
ಒಡೆಯ ಬಸವಣ್ಣನ ಪವಾಡ ರಾಚಯ್ಯ
ನುಡಿದ ಶೋಭಾನ ಶುಭದಲ್ಲಿ[೨೩]

ಸಮಯ ಕಲ್ಯಾಣದಲ್ಲಿದ್ದ ಗುಪ್ತವಾದ ಮಂತ್ರ ಸುರುಳಿಯು ತೆಗೆದುಕೊಂಡು ಕಡಿಯ ಕಲ್ಯಾಣವೆಂಬ ಕೊಡಿಯಕಲ್ಲಿಗೆ ಬಂದನು.[೨೪]

ಹಲವು ಕಲ್ಲುಗಳೆಂಬ ನಾಮವು
ಫಲವು ಮುಂದೆ ಅಮರಗಣರಿಗೆ
ಮಲಹರನು ತಾ ಬಂದು ನಿಲುವನು ಕಡಿಯಕಲ್ಯಾಣಕೆ[೨೫]

ಕಡಿಯಕಲ್ಯಾಣಕೆಂಬ ಗ್ರಾಮಕೆ ಮೃಡನ ಸಿಂಹಾಸನವು
ಮುಂದೆ ಆಗಬೇಕೆಂದು[೨೬]

ಈ ಎಲ್ಲಾ ಪದ್ಯಗಳಲ್ಲಿ ಕೊಡೆಯ ಕಲ್ಲನ್ನು 'ಕಡೇಕಲ್ಯಾಣ' ಎಂಬುದಾಗಿ ಸಂಬೋಧಿಸಲಾಗಿದೆ.

"ಇದೆಲ್ಲನ್ನು ನೋಡಿದರೆ ಕೊಡೇಕಲ್ಲ ಬಸವಣ್ಣ ಅಮರ ಕಲ್ಯಾಣವಾದ ದಿಗ್ಗಿ ಪ್ರದೇಶಕ್ಕೆ ಬಂದ ಸಂದರ್ಭದಲ್ಲಿ ಸಂಗಮನಾಥನು ಲಿಂಗೈಕ್ಯನಾಗಿದ್ದನೆಂದು ತಿಳಿದು ಬರುತ್ತದೆ. ನಂತರ ನಾಗಾವಿಗೆ ಬಂದಾಗ ಮಗ ಈರಪ್ಪಯ್ಯನ ಪ್ರಸ್ತಾಪ ಮಾತ್ರ ಬರುವುದರಿಂದ ಆಗ ಗುಂಡಬಸವಣ್ಣನು ಬದುಕಿರಲಿಲ್ಲವೆಂದು ಸ್ಪಷ್ಟವಾಗುತ್ತದೆ. ಇದರಿಂದಾಗಿ ದಿಗ್ಗಿ ಸಂಗಮನಾಥ ಹಿರಿಯ ಗುಂಡಬಸವಣ್ಣನು ಕಿರಿಯ ಇವನಿಗಿಂತ ಚಿಕ್ಕವನು ಕೊಡೇಕಲ್ಲ ಬಸವಣ್ಣನೆಂದು ಸ್ಪಷ್ಟವಾಗುತ್ತದೆ. ಹೀಗಾಗಿ ಆರೂಢ ಸಂಪ್ರದಾಯವನ್ನು ಸ್ವೀಕರಿಸಿದ ಮೊದಲಿಗ ದಿಗ್ಗಿ ಸಂಗಮನಾಥ, ತಿಪ್ಪಣಯ್ಯ, ಗುಂಡಬಸವೇಶ ನಂತರ ಕೊಡೇಕಲ್ಲ ಬಸವಣ್ಣನವರೆಂದು ಕಂಡುಬರುತ್ತದೆ"[೨೭]

ಕಡೆಯಕಲ್ಯಾಣೆಂಬ ಗ್ರಾಮಕೆ
ವಡನೆ ಅಲ್ಲಿಗೆ ಹೋಗಬೇಕೆನಿ
ಮೃಡನ ಸಿಂಹಾಸನವು ಮುಂದೆ ಆಗಬೇಕೆಂದು

ಒಡಂಬಡಿಕೆಯ ಮಾಡುತಾಗಲೆ

ನಡಸಿದನು ತಾ ಸಕಲ ಭಕ್ತರ

ಅಡಿಗಡಿಗೆ ಆಶ್ಚರ್ಯಗಳನು ತೋರುತ್ತೈತರಲು[೨೮]

ಒಂದು ಪ್ರಮುಖವಾದ ಅಂಶವೆಂದರೆ ಆದಿಯಲ್ಲಿ ಅಸ್ತಿತ್ವಕ್ಕೆ ಬಂದುದು ದಿಗ್ಗಿ ಪ್ರದೇಶದ 'ಅಮರಕಲ್ಯಾಣ' ಆಮೇಲೆ ನಾಗಾವಿ ಪ್ರದೇಶದ 'ಧರ್ಮಕಲ್ಯಾಣ' ಕೊನೆಗೆ ಕೊಡೇಕಲ್ಲ ಪ್ರದೇಶದ 'ಕಡೆಯಕಲ್ಯಾಣ' ಎಂದು ಸ್ಪಷ್ಟವಾಗುತ್ತದೆ.

ಈ ಎಲ್ಲಾ ವಿಷಯಗಳನ್ನು ಗಮನಿಸಿದಾಗ ಕೊಡೇಕಲ್ಲು 'ಅಮರಕಲ್ಯಾಣ' ಆಗಿರದೆ; ಅದು 'ಕಡೆಯಕಲ್ಯಾಣ' ಎಂಬುದು ಸ್ಪಷ್ಟವಾಗುತ್ತಿದೆ. ದೇವದುರ್ಗ ಅಥವಾ ಜಲದುರ್ಗ, ಗುತ್ತಿ, ಹಲವು ಕಲ್ಲು ಈ ಪ್ರದೇಶಗಳು ಅಮರಕಲ್ಯಾಣಗಳು ಜಲದುರ್ಗದಲ್ಲಿ ಸಂಗಮನಾಥ ಗದ್ದಿಗೆ ಇರುವುದನ್ನು ಕಾಣುತ್ತೇವೆ. ಸಂಗಮನಾಥನು ನೆಲೆಸಿದ ಪ್ರದೇಶಗಳನ್ನು ಅಮರಕಲ್ಯಾಣ ಎಂದು ಕರೆಯುವರು. ಈ ಕಾರಣದಿಂದ ದಿಗ್ಗಿ ಮತ್ತು ಜಲದುರ್ಗ ಪ್ರದೇಶಗಳು ಅಮರಕಲ್ಯಾಣವೆಂದು ಕೊಡೇಕಲ್ಲ ಸಾಹಿತ್ಯದಿಂದ ತಿಳಿದುಬರುತ್ತದೆ. ರಾಚಪ್ಪಯ್ಯನವರ ಕೃತಿಯಾದ ಸಂಧಿವಚನ ಕೃತಿಯ ಸಂಧಿ ೩ ಪದ್ಯ ೨೮ ರಲ್ಲಿ, ವೀರಸಂಗಪ್ಪಯ್ಯನ ನಂದಿಯಾಗಮಲೀಲೆ ೧೪-೧೫ನೇ ಸಂಧಿಗಳಲ್ಲಿ ಕೊಡೇಕಲ್ಲು 'ಕಡಿಯ ಕಲ್ಯಾಣ' ಅಥವಾ 'ಕಡೇಕಲ್ಯಾಣ'ವೆಂದು ತಿಳಿದುಬರುತ್ತದೆಯೇ ಹೊರತು 'ಅಮರಕಲ್ಯಾಣ'ವೆಂದು ಮೂಡಿ ಬಂದಿಲ್ಲ.

**ಕೊನೆಯ ಟಿಪ್ಪಣಿಗಳು**

೧. ಮಾರ್ಗ-೩ (ಸಂ) ಡಾ.ಎಂ.ಎಂ.ಕಲಬುರ್ಗಿ, ಪುಟ ೧೯೪-೧೯೫

೨. ಕೊಡೇಕಲ್ಲ ಬಸವಣ್ಣ: ಒಂದು ಅಧ್ಯಯನ, ಡಾ.ಬಸವಲಿಂಗ ಸೊಪ್ಪಿಮಠ, ಪುಟ ೧೭

೩. ಅಮರಕಲ್ಯಾಣ-ಡಾ.ಶಿವಾನಂದ ವಿರಕ್ತಮಠ, ಪುಟ ೫

೪. ಅದೇ ಪುಟ ೫

೫. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ, ಡಾ. ಬಸವಲಿಂಗ ಸೊಪ್ಪಿಮಠ, ಪುಟ ೨೩

೬. ಗುಂಡ ಬಸವೇಶ್ವರ ಚರಿತ್ರೆ- (ಸಂ) ಡಾ.ಎಂ.ಎಂ.ಕಲಬುರ್ಗಿ, ಸಂಗಪ್ಪಯ್ಯಸ್ವಾಮಿ, ಪುಟ ೫೭

೭. ಅದೇ ಪ್ರಸ್ತಾವನೆ, ಪುಟ xvi

೮. ನಂದಿಯಾಗಮಲೀಲೆ-ಸಂ. ಆಯ್.ಜಿ.ಕೊಡೇಕಲ್ ಮಠ, ಪುಟ ೨೨೧

೯. ಅದೇ ಪುಟ ೨೨೪

೧೦. ಅದೇ ಪುಟ ೨೨೪

೧೧. ಗುಂಡ ಬಸವೇಶ್ವರ ಚರಿತ್ರೆ (ಸಂ) ಡಾ. ಎಂ.ಎಂ.ಕಲಬುರ್ಗಿ ಸಂಗಪ್ಪಯ್ಯಸ್ವಾಮಿ, ಪ್ರ. ಪುಟ xvii

೧೨. ಅದೇ ಪ್ರ.ಪುಟ xvii

೧೩. ಅದೇ ಪುಟ ೧೨೪

೧೪. ಅದೇ ಪ್ರ.ಪುಟ xvii

೧೫. ಅದೇ ಪ್ರ. ಪುಟ xxxiii

೧೬. ಅದೇ ಪ್ರ. ಪುಟ xxxiii

೧೭. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ ಮಠ, ಪುಟ ೨೩೩

೧೮. ಸಾಲೋಟಗಿ ಡಂಗುರ ಪದಗಳು-ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ಪುಟ ೨೨

೧೯. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ ಮಠ, ಪುಟ ೨೩೭

೨೦. ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ- ಡಾ.ಬಸವಲಿಂಗ ಸೊಪ್ಪಿಮಠ, ಪುಟ ೨೪

೨೧. ಅದೇ ಪುಟ ೨೪

೨೨. ಅದೇ ಪುಟ ೨೫

೨೩. ರಾಚಪ್ಪಯ್ಯ ಕೃತಿಗಳು (ಸಂ) ಡಾ.ಶಿವಾನಂದ ವಿರಕ್ತಮಠ, ಪುಟ ೨೮೭

೨೪. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ ಮಠ, ಪುಟ ೧೮೧

೨೫. ಅದೇ ಪುಟ ೯

೨೬. ಅದೇ ಪುಟ ೪೯

೨೭. ಗುಂಡ ಬಸವೇಶ್ವರ ಚರಿತ್ರೆ-ಸಂ.ಡಾ.ಎಂ.ಎಂ. ಕಲಬುರ್ಗಿ, ಸಂಗಪ್ಪಯ್ಯಸ್ವಾಮಿ, ಪ್ರ.ಪುಟ xvii

೨೮. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ಲಮಠ, ಪುಟ ೨೨೯

# ಅಧ್ಯಾಯ ೭

# ದಿಗ್ಗಿ ಸಂಗಮನಾಥ ಸಾಂಸ್ಕೃತಿಕ ಆಚರಣೆಗಳು

# ಅಧ್ಯಾಯ ೭

# ದಿಗ್ಗಿ ಸಂಗಮನಾಥ ಸಾಂಸ್ಕೃತಿಕ ಆಚರಣೆಗಳು

ಹಿಂದು-ಮುಸ್ಲಿಂ ಭಾವೈಕ್ಯತೆಯನ್ನು ಹೊಂದಿ, ತತ್ವ ಆಚರಣೆಗಳಲ್ಲಿ ಪರಸ್ಪರ ಒಂದು ಎಂಬ ಮನೋಭಾವನೆ ಉಂಟಾಗುವಂತೆ, ನೋಡಿಕೊಂಡಿರುವುದು. ಮುಸಲ್ಮಾನ ಆಚರಣೆಗಳಿಗಿಂತ ವೆಗ್ಗಳವಾಗಿ ಹಿಂದೂವಿನವೇ ಕಾಣಿಸಿಕೊಳ್ಳುತ್ತವೆ. ಅವರ ಆಚಾರ-ವಿಚಾರಗಳು ಹಿಂದುವಿನವು. ಈಗಿನ ಸಂಗಮನಾಥನ ಪೀಠಸ್ಥರು (ಶ್ರೀಗಳು) ವೀರಶೈವರೇ ಎಂದು ಕರೆದುಕೊಳ್ಳುತ್ತಾರೆ. ಆಂತರಿಕವಾಗಿ, ಬಾಹ್ಯವಾಗಿ ವಿಶಿಷ್ಟ ವೀರಶೈವರೇ ಎಂದು ಧೃಢಪಡಿಸುತ್ತದೆ.

ಯಾವುದೇ ಜಾತಿಯವರಿರಲಿ ನಡೆ, ನುಡಿ, ನೋಟದಿಂದ, ಪರಿಶುದ್ಧನಾಗಿರಬೇಕೆಂಬುದೇ ಆಗಿದೆ. ೧೨ನೇ ಶತಮಾನದ ಬಸವಣ್ಣನವರು ಹೇಳಿದ 'ವಿಪ್ರಮೊದಲು ಅಂತ್ಯಜ ಕಡೆಯಾಗಿ' ಎಲ್ಲರನ್ನೂ ಒಂದೇ ದೃಷ್ಟಿಯಿಂದ ಕಂಡ ಉದಾತ್ತ ವಿಚಾರಗಳು ಆಚರಣೆಯಲ್ಲಿ ಉಳಿದುಕೊಂಡು ಬಂದಿದೆ. ಬಂದು ಅರ್ಥದಲ್ಲಿ ಇದು ಜಾತ್ಯಾತೀತ ಸಂಪ್ರದಾಯವೆಂದು ಕಂಡು ಬರುತ್ತದೆ.

ದಿಗ್ಗಿಯ ಊರ ಹೊರಗೆ ಸಂಗಮನಾಥನ ಗವಿ (ದೇವಾಲಯ) ಇದೆ. ದಿವಸಕ್ಕೆ ಎರಡು ಸಾರಿ ಗುಡಿಯ ಪೂಜಾರಿಗಳು ಪೂಜಿಸುತ್ತಾರೆ. ಸಂಗಮನಾಥನ ದೇವಸ್ಥಾನ ಆಕರ ಮುಸ್ಲಿಂ ವಿನ್ಯಾಸ, ಆ ದೇವಸ್ಥಾನಗಳ ಮೇಲೆ ಹಾರಾಡುವ ಹಸಿರು ನಿಶಾನೆ ಮುಸ್ಲಿಂ ಆಚರಣೆಯ ದ್ಯೋತಕವಾಗಿ ಕಂಡುಬರುತ್ತದೆ. ಯಾವಾಗ ಸಂಗಮನಾಥನ ಪೂಜೆ ನಡೆಯುತ್ತಿದೆಯೋ ಮೇಲಿನ ಗವಿಯಲ್ಲಿ ಪ್ರಭುದೇವನ ಪೂಜೆಯು ನಡೆಯುತ್ತದೆ. ಹಿಂದು-ಮುಸ್ಲಿಂ ಅಷ್ಟೇ ಅಲ್ಲದೆ ಹಲವಾರು ಧರ್ಮದ ಜನತೆ ಆಗಮಿಸುತ್ತಾರೆ.

ದಿಗ್ಗಿ, ಜಲದುರ್ಗ, ಕೊಡೇಕಲ್ಲುಗಳಲ್ಲಿ ಸಂಗಮನಾಥನ ದೇವಸ್ಥಾನಗಳಿವೆ. ದಿಗ್ಗಿಯಲ್ಲಿ ಸಂಗಮನಾಥನ ಮೂರ್ತಿಪೂಜೆಯನ್ನು ಕೈಗೊಂಡರೆ ದಿಗ್ಗಿ, ಜಲದುರ್ಗಗಳಲ್ಲಿ ಅವನ ಗೋರಿರೂಪದ 'ಗದ್ದುಗೆ'ಗೆ ಪೂಜೆಯನ್ನು ಕೈಗೊಳ್ಳುವರು. ಜಲದುರ್ಗ ಮತ್ತು ಕೊಡೇಕಲ್ಲದಲ್ಲಿ ಪೂಜಾರಿಗಳು ಲಿಂಗರಹಿತರಾದ ಗದ್ದುಗೆಗೆ ಪೂಜೆ ಮಾಡುವರು. ಹಿಂದೂ ಸಂಪ್ರದಾಯದಂತೆ ವಿಭೂತಿ, ಕುಂಕುಮ

ಧರಿಸುವುದು ಇಲ್ಲವಾದರೂ ಕಾಯಿ ಒಡೆಯುವುದು ಜಾಗಟೆ, ಗಂಟೆ, ನಗಾರಿ ವಾದ್ಯಗಳ ಜೊತೆಗೆ ಮಣ್ಣಿನ ಪಾತ್ರೆಯಲ್ಲಿ ಲೋಭಾನಹಾಕಿ ಧೂಪವನ್ನು ಬೆಳಗುತ್ತಾ ಸಂಗಮನಾಥನ ಹಾಡುಗಳನ್ನು ಹಾಡುತ್ತಾರೆ. ದಿಗ್ಗಿಯಲ್ಲಿ ಪೂಜಾರಿಗಳು ಮತ್ತು ಶ್ರೀಗಳು ಇಷ್ಟಲಿಂಗಧಾರಿಗಳು, ವಿಭೂತಿ, ಕುಂಕುಮ, ಕಾಯಿ, ಧೂಪ, ಗಂಟೆ ಇವೆಲ್ಲವನ್ನು ಕೈಗೊಳ್ಳುವರು. ಇಷ್ಟಲಿಂಗವನ್ನು ಧರಿಸಿಕೊಳ್ಳದೇ ಇದ್ದರೆ ಜನತೆಯು ಬೇರೆ ರೀತಿಯಲ್ಲಿ ಕಾಣುತ್ತಾರೆ ಎನ್ನುವ ಭಾವನೆಯಿಂದ ಧರಿಸಿದ್ದಾರೆ ಎಂದು ಶ್ರೀಗಳಿಂದ ತಿಳಿದುಬಂದಿತು.

ಜಲದುರ್ಗ ಮತ್ತು ಕೊಡೇಕಲ್ ಪೀಠಾಧ್ಯಕ್ಷರು, ಸದ್ಭಕ್ತರು ಸ್ನಾನಮಾಡಿ ಸಮಾಧಿ ಗದ್ದುಗೆಗೆ ನಮಸ್ಕರಿಸಿದರೆ ದಿಗ್ಗಿಯ ಶ್ರೀಗಳು ಭಕ್ತರು ಸಂಗಮನಾಥನ ಮೂರ್ತಿಗೆ ನಮಸ್ಕರಿಸುವರು. ಆರೂಢ ಸಂಗಮೇಶ್ವರ ಕೊಡೇಕಲ್ಲ ಬಸವಣ್ಣನವರಿಗೆ ಹಸ್ತ ಮಸ್ತಕ ಮಾಡಿದನೆಂದು ನಂದಿಯಾಗಮಲೀಲೆಯಲ್ಲಿ ತಿಳಿದು ಬರುವಂತೆ ಇದು ಮುಂದೆ ತನ್ನ ಎಲ್ಲಾ ಶಿಷ್ಯಪರಂಪರೆಯವರೆಗೆ ಈ ಪದ್ಧತಿ ಸಾಗುತ್ತಾ ಬಂದಿದೆ.

ದಿಗ್ಗಿಯ ಜಲದುರ್ಗ, ಕೊಡೇಕಲ್ಲ ಸಂಗಮನಾಥನ ಮುಖ್ಯ ನೈವೇದ್ಯ ಮಾದಲಿ ವಿಶೇಷವಾದುದು. ಮುಸಲ್ಮಾನ ಭಕ್ತರು ಸಕ್ಕರೆ ಓದಿಸುತ್ತಾರೆ. ಇವರು ಜಯಕಾರ ಹಾಕಿದರೆ ಮುಸಲ್ಮಾನ ಭಕ್ತರು 'ದೀನ್' ಹೊಡೆಯುತ್ತಾರೆ. ದಿಗ್ಗಿ ಮತ್ತು ಜಲದುರ್ಗದ ಶ್ರೀಗಳು ಕೆಳಗೆ ಬಿಳಿ ಧೋತಿಯನ್ನು ಕಾವಿ ಮೇಲಂಗಿಯನ್ನು ಧರಿಸಿ ಮೇಲೆ ಕಾವಿ ವಸ್ತ್ರವನ್ನು ಹಾಕಿಕೊಂಡಿರುತ್ತಾರೆ.

### ಪಲ್ಲಕ್ಕಿ ಮಹೋತ್ಸವ

ದಿಗ್ಗಿಯಲ್ಲಿ ನಡೆಯುವ ವಿಶೇಷಗಳೆಂದರೆ ಮಕರ ಸಂಕ್ರಮಣ ಆಚರಣೆ, ಜಾತ್ರಾ ಮಹೋತ್ಸವ. ಪ್ರತಿ ವರ್ಷ ಜನವರಿ ೧೪ರಂದು ಮಕರ ಸಂಕ್ರಮಣ ಆಚರಣೆ ನಿಮಿತ್ಯ ದಿಗ್ಗಿ ಸಂಗಮೇಶ್ವರ ದೇವಸ್ಥಾನದಿಂದ ಮುಂಜಾನೆ ಮಂಜಿನಲ್ಲಿ ಸದ್ಭಕ್ತರೊಡಗೂಡಿ ಪಲ್ಲಕ್ಕಿಯಲ್ಲಿ ಸಂಗಮೇಶ್ವರನ ಮೂರ್ತಿಯನ್ನು ಇಟ್ಟು ಜಯಕಾರ, ವಿವಿಧ ವಾದ್ಯ ಮೇಳದೊಂದಿಗೆ ಶಹಾಪೂರದ ಕೋಟೆಯನ್ನು ಮುಂಜಾನೆ ೬ ಘಂಟೆಗೆ ತಲುಪುವುದು. ಭಕ್ತರು ಊರನ್ನೆಲ್ಲ ತಳಿರು ತೋರಣಗಳಿಂದ ಸಿಂಗರಿಸಿ ಪಲ್ಲಕ್ಕಿಯನ್ನು ಸಂಗಮನಾಥನನ್ನು ಪೂಜಿಸಿ ಪುಷ್ಪವನ್ನು ಮುಡಿಸಿ ನಮಸ್ಕರಿಸುವರು.

ಶಹಪೂರದಿಂದ ದಿಗ್ಗಿ, ಹಳಸಗಳಿ, ಮಡ್ನಾಳ ಗ್ರಾಮಗಳ ಮಾರ್ಗವಾಗಿ ಭೀಮಾನದಿಯ ತಟದ ವಿರಸಗುಂಡಿಗಿ ಗ್ರಾಮದ ನದಿ ತಲುಪಿ, ಭಕ್ತರು ಗಂಗಾಸ್ನಾನ ತುಂಗಾ ಪಾನ ಎನ್ನುವಂತೆ ಗಂಗೆಯಲ್ಲಿ ಮಿಂದು ಪಾಪ ಕರ್ಮಾದಿಗಳನ್ನು ತೊಳೆದುಕೊಂಡು ಶಾಸ್ತ್ರೋಕ್ತವಾಗಿ ಸಂಗಮನಾಥನನ್ನು ಪೂಜಿಸಿ ಹಲವು ಗ್ರಾಮಗಳಲ್ಲಿ ಭಕ್ತರು ಪೂಜಿಸಿ ಭಕ್ತಾದಿಗಳು ಪ್ರಸಾದ ಮಾಡಿಸಿರುತ್ತಾರೆ. ಪ್ರಸಾದವನ್ನು ಸ್ವೀಕರಿಸಿ ಹೊರಟು ಶಹಾಪೂರ ಹನುಮಂತ ದೇವರ ಕಟ್ಟಿ ರಾತ್ರಿ ೭-೮ ಗಂಟೆಗೆ ತಲುಪುವುದು. ಶಹಾಪೂರವನ್ನು ಅಲಂಕಾರಗೊಳಿಸಿರುತ್ತಾರೆ. ಬೀದಿ ಬೀದಿಗಳಲ್ಲಿ ಪಲ್ಲಕ್ಕಿ ಮೆರವಣಿಗೆ ನಡೆಯುತ್ತದೆ. ಅಲ್ಲಲ್ಲಿ ಮನರಂಜನೆ ನೃತ್ಯಗಳು, ಹಾಡುಗಳು ಭಕ್ತರನ್ನು ಆಕರ್ಷಿಸುತ್ತವೆ.

ಛತ್ರಿ ಚಾಮರ ಹಸಿರು ನಿಶಾನೆ ಡೊಳ್ಳುಕುಣಿತಗಳ ಜೊತೆಗೆ ಪಲ್ಲಕ್ಕಿಯು ಸಾಗುತ್ತದೆ. ಹಲವಾರು ಭಕ್ತರು ಪಲ್ಲಕ್ಕಿ ಬರುವ ಬೀದಿಯಲ್ಲಿ ಅಡ್ಡಲಾಗಿ ಮಲಗಿರುತ್ತಾರೆ. ಪಲ್ಲಕ್ಕಿ ಹೊತ್ತವರು ಇವರನ್ನು ದಾಟುತ್ತಾ ಸಾಗುತ್ತಾರೆ. ಹಲವಾರು ಸದ್ಭಕ್ತರು ಸಾಷ್ಟಾಂಗ ನಮಸ್ಕಾರ ಹಾಕುವರು. ಈ ಮೆರವಣಿಗೆಯಲ್ಲಿ ಜಾತಿಮತ ಭೇಧ ಎನ್ನದೆ ಸರ್ವಜಾತಿಯವರು ಪಾಲ್ಗೊಳ್ಳುವರು. ಜನವರಿ ೧೫ರಂದು ಬೆಳಗಿನ ಜಾವ ಸಂಗಮನಾಥ ದಿಗ್ಗಿ ಬೆಟ್ಟವನ್ನು ಸೇರುತ್ತಾನೆ. ಪಲ್ಲಕ್ಕಿ ಮೆರವಣಿಗೆ ೩೬ ಗಂಟೆಗಳ ಕಾಲ ಸತತವಾಗಿ ಸಾಗಿರುವುದು ಭಕ್ತಿ ಭಾವೈಕ್ಯತೆ ದ್ಯೋತಕವಾಗಿದೆ.

### ಜಾತ್ರಾ ಮಹೋತ್ಸವ

ದಿಗ್ಗಿಯಲ್ಲಿ ಧಾರ್ಮಿಕ ಆಚರಣೆಗಳಲ್ಲಿ ಎತ್ತಿ ಹೇಳಬೇಕಾದ ವಿಶೇಷವೆಂದರೆ ಉತ್ಸವ ಮತ್ತು ಆ ಅವಧಿಯಲ್ಲಿ ನಡೆಯುವ ಆಚರಣೆ. ದಿಗ್ಗಿ ಮತ್ತು ಜಲದುರ್ಗದಲ್ಲಿ, ಸಂಗಮನಾಥನ ದೇವಸ್ಥಾನಗಳು ಎಲ್ಲೆಲ್ಲಿ ಇವೆಯೋ ಅಲ್ಲೆಲ್ಲ ಕಡೆಗೂ ಸಂಗಮನಾಥ ಉತ್ಸವಗಳು ಜರಗುತ್ತದೆ. ದಿಗ್ಗಿ ಮತ್ತು ಜಲದುರ್ಗಗಳಲ್ಲಿ ನಡೆಯುವ ಜಾತ್ರೆಯು ವಿಶೇಷವಾದುದು.

ಸುಕ್ಷೇತ್ರ ದಿಗ್ಗಿ ಸಂಗಮೇಶ್ವರ ಜಾತ್ರಾ ಮಹೋತ್ಸವವು ಪ್ರತಿ ವರ್ಷ ಶ್ರಾವಣಮಾಸದ ಕಡೇ ಸೋಮವಾರ ನಡೆಯುತ್ತದೆ. ಜಲದುರ್ಗದಲ್ಲಿ ಶಿವರಾತ್ರಿ ದಿವಸದಂದು ಜಾತ್ರೆ-ಪಲ್ಲಕ್ಕಿ ಉತ್ಸವ, ಛಟ್ಟಿ ಅಮವಾಸ್ಯೆಗೆ ದೀಪೋತ್ಸವ ಸಾಮೂಹಿಕ ವಿವಾಹಗಳು ಶುದ್ಧ ಶಿವಾಚಾರ ಸಂಪನ್ನ ಗುರುಕರಜಾತ ಅಶ್ವನಾಮ ಆರೂಢಮಠ ಐಕ್ಯಸ್ಥಳ ಶೂನ್ಯ ಸಿಂಹಾಸನ ಅಧಿಪತಿಗಳಾದ ಬಸವೇಶ್ವರದೇವರ ವರಪುತ್ರರಾದ ಪರಮಪೂಜ್ಯ ಶ್ರೀ ಶ್ರೀ ಶ್ರೀ ವೀರಯ್ಯ ಅಪ್ಪನವರು ಕೊಡೇಕಲ್ ಪೀಠಾಧೀಶ ಮಹಲಿನಮಠ ಸುಕ್ಷೇತ್ರ ಕೊಡೇಕಲ್ ದಾಸೋಹ ಮಹಾಮನೆ ಇವರ ದಿವ್ಯ ಸಾನಿಧ್ಯದಲ್ಲಿ ಜರುಗುತ್ತವೆ. ಶ್ರೀ ವೀರಸಂಗಪ್ಪಯ್ಯನವರ 'ನಂದಿಯಾಗಮಲೀಲೆ' ಪುರಾಣವು ನಡೆಯುವುದು.

ಶ್ರಾವಣಮಾಸ ಆರಂಭವಾಗುತ್ತಿದ್ದಂತೆ ದಿಗ್ಗಿಯ ಸುತ್ತಲಿನ ಸದ್ಭಕ್ತರು ತಿಂಗಳ ಪರ್ಯಂತರ ಸಂಗಮನಾಥನಿಗೆ ಕನಕದಲ್ಲಿ ದೀಪವನ್ನು ಹಚ್ಚಿಕೊಂಡು ಆಗಮಿಸಿ ಕಳಸ ಬೆಳಗಿ ಕಾಯಿ, ಕರ್ಪೂರ, ನೈವೇದ್ಯದೊಂದಿಗೆ ಪೂಜೆಮಾಡಿ, ಕೆಲವರು ಶಾಸ್ತ್ರೋಕ್ತವಾಗಿ ಅಭಿಷೇಕಗಳನ್ನು ಮಾಡಿಸುವರು. ಜಾತ್ರೆಗೆ ಮಹಾರಾಷ್ಟ್ರ, ಶ್ರೀಶೈಲ, ಸಗರನಾಡಿನ ಸುತ್ತಮುತ್ತಲಿನ ಗ್ರಾಮ ನಗರಗಳ ಜನಸ್ತೋಮ ಆಗಮಿಸಿ ಶ್ರಾವಣ ಮಾಸದ ಕೊನೆಯ ಸೋಮವಾರ ನಡೆಯುವ ಪಲ್ಲಕ್ಕಿ ಉತ್ಸವಗಳಲ್ಲಿ ಪಾಲ್ಗೊಳ್ಳುವರು. ಈ ಸಂದರ್ಭದಲ್ಲಿ ಸಂಗಮನಾಥನ ತ್ರಿಕಾಲ ಪೂಜೆ ನಡೆಯುತ್ತದೆ. ಪಲ್ಲಕ್ಕಿಯನ್ನು ಬಂಗಾರದ ಪಂಚ ಕಳಸಗಳಿಂದ, ಬೆಳ್ಳಿಯ ಛತ್ರಿಗಳು, ಪಲ್ಲಕ್ಕಿಯ ಮುಂಭಾಗದಲ್ಲಿ ಬೆಳ್ಳಿಯ ಸಿಂಹದ ಮೂರ್ತಿಗಳು, ಛತ್ರಿ, ಚಾಮರ, ಹಸಿರು ನಿಶಾನೆಗಳಿಂದ, ಹೂಗಳಿಂದ ಸಿಂಗರಿಸುವರು. ಸಂಗಮನಾಥನ ಮೂರ್ತಿಯನ್ನು ಇಟ್ಟು ಪೂಜಿಸುವರು. ಸಾಯಂಕಾಲ ಐದು ಗಂಟೆಗೆ ಊರಿನ 'ಅಂತ್ಯಜ' ಭಕ್ತರು ಹಲಗೆ ಬಾರಿಸುವರು. ಮತ್ತೊಮ್ಮೆ ಪೂಜಿಸಿ ಆರುಗಂಟೆಗೆ ಜನಸಾಗರ ಧಾವಿಸಿ ಬರುವರು. ಆಗ ಪಲ್ಲಕ್ಕಿ ದಿಗ್ಗಿ ಬೆಟ್ಟದ

ಗವಿಯಿಂದ ಜಯಕಾರವನ್ನು ಹಾಕುತ್ತಾ ಎಂಬತ್ತು ಮೆಟ್ಟಿಲುಗಳಿಂದ ಕೆಳಗಿಳಿದು ಮುಂದೆ ಬಾವಿಯ ಹತ್ತಿರವಿರುವ ಬನ್ನಿ ಕಟ್ಟೆ ತಲುಪಿ ಮತ್ತೆ ಅಲ್ಲಿ ಪೂಜೆಗೊಂಡು ಹಲವಾರು ಭಕ್ತಾದಿಗಳು ಆಗಮಿಸಿ ಮಂಗಳಾರತಿಯನ್ನು ಮಾಡಿ ದೀಪ ಧೂಪಗಳೊಂದಿಗೆ ಕಾಯಿಗಳನ್ನ ಒಡೆಸುವರು ನಂತರ ಪಲ್ಲಕ್ಕಿ ಮತ್ತೇ ಸಂಗಮನಾಥನ ಗವಿಯನ್ನು ಪ್ರವೇಶಿಸುವುದು.

ಪಲ್ಲಕ್ಕಿ ಉತ್ಸವದ ಮರುದಿವಸ ಮಂಗಳವಾರದಂದು ಸಂಗಮೇಶ್ವರ ರಥೋತ್ಸವ ಅಂದು ಸಂಗಮನಾಥ ಮತ್ತು ಪ್ರಭುದೇವರ ತ್ರಿಕಾಲ ಪೂಜೆ ಜರುಗುತ್ತದೆ. ರಥವನ್ನು ಹೂವಿನಿಂದ ಸಿಂಗರಿಸಿ ಇನ್ನೊಂದು ವಿಶೇಷವೆಂದರೆ ನಿಯಮದಂತೆ ರಥದ ಬೆಳ್ಳಿಯ ಕಳಸವನ್ನು ಹಳೆಸಗರದವರಿಂದ ಹಲವಾರು ವಾದ್ಯಗಳ ಬಾಜಾ ಬಜಂತ್ರಿಗಳಿಂದ ಮೆರವಣಿಗೆ ಸಮೇತವಾಗಿ ದಿಗ್ಗಿಯ ಸಂಗಮನಾಥನ ದೇವಾಲಯಕ್ಕೆ ಆಗಮಿಸವುದು ರಥದ ಮಿಣಿಯನ್ನು ದಿಗ್ಗಿಯ ಗ್ರಾಮಸ್ಥರೇ ಮಿಣಿಯನ್ನು (ಹಗ್ಗ)ವನ್ನು ಮೆರವಣಿಗೆ ಮಾಡುತ್ತಾ ತರುವರು. ಕಳಸವನ್ನು ರಥಕ್ಕೆ ಇಟ್ಟು ಹಗ್ಗವನ್ನು ಕಟ್ಟಿ ರಥವನ್ನು ಶ್ರೀಗಳಿಂದ ಪೂಜಿಸಿ ಮಂಗಳಾರತಿಯನ್ನು ಮಾಡಿದ ನಂತರ ರಥಸಾಗುವುದು. ರಥದಲ್ಲಿ ಪೂಜಾರಿಗಳು ಹತ್ತಿರುವರು. ಜನಸಾಗರವು ಜಾತ್ರೆಯಲ್ಲಿ ಪಾಲ್ಗೊಂಡು ಹರ್ಷವನ್ನು ವ್ಯಕ್ತಪಡಿಸುವರು. ಸಾವಿರಾರು ಜನರು ರಥವನ್ನು ಎಳೆಯುವರು. ಹಲವಾರು ವಾದ್ಯಗಳು ಮೊಳಗುವುದು. ರಥವು ತನ್ನ ಸ್ಥಳವನ್ನು ಮುಟ್ಟಿ ನಂತರ ಸಂಗಮನಾಥನ ಸ್ಥಳಕ್ಕೆ ಬಂದು ತಲುಪುವುದು ಮೇಲು ಅಂತ್ಯಜ ಎನ್ನದೇ ಎಲ್ಲ ಧರ್ಮದ ಜನರು ಆಗಮಿಸಿ ತಮ್ಮ ತಮ್ಮ ಹರಕೆಯನ್ನು ಮುಟ್ಟಿಸಿ ಸಂಗಮನಾಥನ ದರ್ಶನವನ್ನು ಪಡೆದು ಮರಳುವರು.

ದಿಗ್ಗಿ ಜಾತ್ರೆಯ ಇನ್ನೊಂದು ವಿಶೇಷವೆಂದರೆ ಜಾನಪದ ಆಟಗಳಾದ ಹಾಲುಗಂಬ-ರಣಗಂಬ ಎತ್ತುವುದು ಕುಸ್ತಿ ಮುಂತಾದವುಗಳನ್ನು ಆಡುವರು. ಭಜನೆ ಕಾರ್ಯಕ್ರಮಗಳನ್ನು ಏರ್ಪಡಿಸುವರು.

ದಿಗ್ಗಿ ಸಂಗಮನಾಥನ ಜಾತ್ರೆಗಿಂತ ಭಿನ್ನವಾಗಿ ಜಲದುರ್ಗದ ಜಾತ್ರೆ ಜರುಗುತ್ತದೆ. ಸಂಗಮನಾಥನ ಐಕ್ಯಸ್ಥಳ ಭೂಸ್ವರ್ಗ ಕೈಲಾಸ ಸುಕ್ಷೇತ್ರ ಜಲದುರ್ಗವಾಗಿದೆ. ಶಿವರಾತ್ರಿಯಂದು ನಡೆಯುವ ಜಾತ್ರೆ ಪಲ್ಲಕ್ಕಿ ಉತ್ಸವ ಈ ಎರಡು ಪಲ್ಲಕ್ಕಿ ಉತ್ಸವಗಳನ್ನು ಗಮನಿಸಿದರೆ ಅಮರಕಲ್ಯಾಣದ ಕಾಲದ ಸಂಬಂಧವನ್ನು ಸೂಚಿಸುವುದು. ಜಲದುರ್ಗದ ಪಲ್ಲಕ್ಕಿಯನ್ನು ಅಲಂಕರಿಸಿ ಹೊರಡುವರು. ಆ ಉತ್ಸವದಲ್ಲಿ ಬಸವರಾಜಪ್ಪಯ್ಯನವರು ಪಟ್ಟದ ಕುದರೆಯನ್ನು ಹತ್ತಿ ಸಾಗುವರು. ಸಂಗಮನಾಥನ ವಾಹನ ಕುದುರೆಯಾಗಿರಬಹುದೆಂದು ತಿಳಿದುಬರುತ್ತದೆ.

ದಿಗ್ಗಿ ಸಂಗಮನಾಥನ ಆಚಾರ-ವಿಚಾರ ಮುಂದೆ ಆತನ ಶಿಷ್ಯ ಪರಂಪರೆಯಲ್ಲಿಯೂ ಬೆಳೆದು ಬಂದಿದೆಯೆಂದು ತಿಳಿದುಬರುತ್ತದೆ.

## ಅಧ್ಯಾಯ ೮

# ಗವಿ ಸಂಸ್ಕೃತಿಯ ವಾರಸುದಾರಿಕೆ ಮತ್ತು ದಿಗ್ಗಿ ಸಂಗಮನಾಥ

ಸಂಸ್ಕೃತಿಯೆನ್ನುವುದು ಜೀವನ ಪದ್ಧತಿ. ಈ ಪದ್ಧತಿ ಒಬ್ಬರಿಂದ ಆರಂಭವಾಗಿ ಸಮಷ್ಠಿ ಜನರ ಅನುಮೋದನೆಗೆ ಒಳಗಾಗಿ ಮುಂದುವರೆದುಕೊಂಡು ಹೋಗುವ ಜೀವನಕ್ರಮ. ಲಿಂಗಭೇದ, ವರ್ಣಭೇದ ಮತ್ತು ವರ್ಗಭೇದ ನಿರಸನವಾದ ಸಮಾಜವನ್ನು ನಿರ್ಮಿಸಬೇಕೆಂಬುದು ೧೨ನೇ ಶತಮಾನದ ಸಮಯಕಲ್ಯಾಣದ ಬಸವಾದಿ ಶರಣರ ಚಿಂತನೆಯಾಗಿತ್ತು. ಈ ಚಿಂತನೆಯನ್ನು ಮುಂದುವರೆಸಿಕೊಂಡು ಬಂದವರು ದಿಗ್ಗಿ ಸಂಗಮನಾಥ, ಕೊಡೇಕಲ್ಲ ಬಸವಣ್ಣ, ಕೊಡೇಕಲ್ ರಾಚಪ್ಪಾಜಿ, ವೀರಸಂಗಪ್ಪಾಜಿ ಮತ್ತು ಗುಂಡಬಸವ ಹಾಗೂ ಮಂಟೇಸ್ವಾಮಿ ಎಂದು ಹೇಳಬಹುದು.

ಶರಣರ ಚರಿತ್ರೆಯಲ್ಲಿ ಸಾಮೂಹಿಕ ಸಾಹಿತ್ಯ ಸೃಷ್ಠಿ ಒಂದು ಪರಂಪರೆಯನ್ನು ನಿರ್ಮಿಸಿತು. ಸಮಾನ ಮನಸ್ಸಿನವರು ಒಂದೆಡೆ ಕೂಡಿದಾಗ ತಮ್ಮ ಅನುಭವಗಳನ್ನು ಹಂಚಿಕೊಂಡದ್ದುಂಟು. ಇಂತಹ ಸಮಾನ ಮನಸ್ಕರ ಸಮಾವೇಶವನ್ನೇ ಅನುಭವಮಂಟಪವೆಂದು ಕರೆದರೆನಿಸುತ್ತದೆ. ಹೀಗೆ ಸಾಮೂಹಿಕವಾಗಿ ಚಿಂತಿಸಿ ಸಾರ್ವಜನಿಕವಾಗಿ ಆಚರಣೆ ತರುವ ಶರಣರ ಬದುಕು ವ್ಯಕ್ತಿ ಮತ್ತು ಸಮಷ್ಠಿ ಉದ್ಧಾರದ ಆಶಯವನ್ನು ಹೊಂದಿತ್ತು. ತನ್ನನ್ನು ತಾನು ಮೊದಲು ಆತ್ಮ ನಿರೀಕ್ಷಣೆ ಮಾಡಿಕೊಂಡು ಆನಂತರದಲ್ಲಿ ಲೋಕದ ಡೊಂಕನ್ನು ತಿದ್ದುವ ಕೆಲಸಕ್ಕೆ ಮುಂದಾದರು. ಇಂತಹ ಆತ್ಮ ನಿರೀಕ್ಷಣೆಯಲ್ಲಿ ತೊಡಗಿದ ಶರಣರು ಆತ್ಮಕಲ್ಯಾಣಕ್ಕಾಗಿ ಗವಿಸಂಸ್ಕೃತಿಯನ್ನು ಹುಟ್ಟು ಹಾಕಿದರು. ಪ್ರಾಯಶಃ ಬಸವಾದಿ ಶರಣರ ಕಾರ್ಯಕ್ಷೇತ್ರವಾದ ಬಸವಕಲ್ಯಾಣದಲ್ಲಿ ಈಗಲೂ ಶರಣರ ಸ್ಥಳಗಳೆಂದು ತೋರಿಸುವ ನೂರಾರು ಗವಿಗಳನ್ನು ಕಾಣಬಹುದು. ಇಂತಹ ಗವಿಸಂಸ್ಕೃತಿಯ ವಾರಸುದಾರಿಕೆಯನ್ನು ಹೊತ್ತುಕೊಂಡು ಬಂದ ದಿಗ್ಗಿ ಸಂಗಮನಾಥ ಸಮಯಕಲ್ಯಾಣದ ಆಶೋತ್ತರಗಳನ್ನು ಮುಂದಿನ ಕಡೆಯಕಲ್ಯಾಣದವರೆಗೆ ಬಿತ್ತರಿಸಿದ ಕೀರ್ತಿಗೆ ಪಾತ್ರನಾಗಿದ್ದಾನೆ.

ನಮ್ಮ ಶರಣರು ಮೊದಲಿನಿಂದ ಜನ ನಿಬಿಡವಾದ ಏಕಾಂತವಾದ ಬೆಟ್ಟದಲ್ಲಿರುವ ಗವಿಯಲ್ಲಿ ತಪಸ್ಸನ್ನು ಕೈಗೊಂಡು ಜನರ ಸಂಕಷ್ಟಗಳನ್ನು ನಿವಾರಿಸಿ ನಾಡನ್ನು ಸಂಪದ್ಭರಿತವಾಗಿ ಮಾಡುವ ಶಕ್ತಿವಂತರು. "ಸಾಮಾನ್ಯವಾದ ಗೋರಿಗಿಂತ ಭಿನ್ನವಾದ ಗವಿಸಂಪ್ರದಾಯ ಇಲ್ಲಿ ಪ್ರತಿಪಾದಿತವಾದಂತಿದೆ. ದಿಗ್ಗಿ ಸಂಗಮನಾಥನದೂ ಇಂಥದೇ ಗವಿಯಿದ್ದ ಬಗ್ಗೆ ವೀರಸಂಗಪ್ಪಯ್ಯನ ನಂದಿಯಾಗಮಲೀಲೆಯಿಂದ ತಿಳಿದುಬರುತ್ತದೆ."[೧] ಸಂಗಮನಾಥನ ಪರಂಪರೆಯಲ್ಲಿ ಗವಿಸಂಸ್ಕೃತಿಯ ಮಹತ್ವವನ್ನು ವಿವರಿಸುವ ಹತ್ತಾರು ಪದ್ಯಗಳು ಹೀಗೆ ಉಲ್ಲೇಖಿಸಿವೆ.

ಎಂದಮಾತಿಗೆ ಗವಿಯ ಕವಾಟ
ಹೊಂದಿಸಿದ ಶಿಲೆ ಕಡೆಗೆ ಆಗಲು
ಬಂದನಾಗಲೆ ಸಂಗಮೇಶ್ವರ ಬಸವ ದರುಶನಕೆ
ವಂದನೆಯ ಮಾಡಿದನು ಸ್ವಾಮಿಗೆ
ಅಂದು ನಿನ್ನನು ಪೂಜೆ ಮಾಡಲು
ಮಂದ ಮತಿಗಳು ಕಾಡುತಿರಲು ನುಡಿದು ತೋರಿದಿರಿ[೨]

ನೀನೆ ಜಗಕೆ ಕರ್ತೃನಾದರೆ
ದಾನಿ ಸಂಗನುಡಿಸಿ ಕೊಡುವರು
ಅನುಮಾನಿಲ್ಲದೆ ಮರೆವ ತೆರೆಯನು ಹರಿದು ತೋರುವುದು
ಮಾನನಿಧಿಯ ಬಸವರಾಜನು
ತಾನು ಭೂಧರ ಶಿಲೆಯ ಗವಿಯೊಳು
ಆನಂದದಿಂದಲಿ ಹೋಗಿ ಕಂಡನು ಆ ಪರಂಜ್ಯೋತಿಯನು[೩]

ಈ ಪರಿಯಲಿ ಸ್ತುತಿಯ ಮಾಡುತ
ಆ ಪರಂಜ್ಯೋತಿ ದಿಗ್ಗಿಗವಿಯೊಳು
ಭಾಪು ಸಂಗನು ಮಾತನಾಡದೆ ನುಡಿದನರ್ತಿಯಲಿ
ಭೂಪ್ರದಕ್ಷಣ ಮಾಡಹೇಳಿದೆ
ಆ ಪರಬ್ರಹ್ಮನ ನುಡಿಯ ಸಾರೆಂದು
ರೂಪುದೋರಿದ ಚರ್ಮಾಂಬರ ಕಂಸಿರಾಕ್ಷಿಗಳಿಂದ[೪]

ನಿಂದು ಸುತ್ತಿಯ ಮಾಡಲಾಕ್ಷಣ
ಹೊಂದಿಸಿದ ಶಿಲೆ ಕಡೆಗೆ ಆಗಲು

ಮುಂದೆ ಗವಿಯ ಕವಾಟತೆರೆದು ಮಾರ್ಗವೈದಿಕೆ
ನಂದಿ ಹೋಗಲು ಸಾರ್ಥವಾಯಿತು
ಚಂದ್ರ ಕಿರಣವು ಪ್ರಭೆಯೂ ಗುಹೆಯೊಳು
ಅಂಧಕಾ ವಳವಡದು ರಶ್ಮಿಯ ಹರಿದು ಪ್ರಜ್ವಲಿಸೆ[೫]

ಭಾವಬಂತನು ಗವಿಯ ಪೂಕ್ಕನು
ತೀವಿ ಪರಂಜ್ಯೋತಿಯೊಳು ಬೆರೆದನು
ದೀವಿಗೆಗಳು ಎರಡು ಒಂದಾಗಿ ಕೂಡಿ ಜ್ಯೋತಿಗಳು
ದೇವ ಸಂಗನಬಸವನಾದನು
ಜೀವ ಕಾಯವ ಬರೆದ ತೆರೆದಲಿ
ಈವ ಪಶುವಿನ ಪಾಲೊಳಗೆ ಪಾಲ್ಬರೆದ ತೆರೆನಂತೆ[೬]

ಮತ್ತೆ ಗೌತಮ ಗಾರ್ಗಿ ಅಗಸ್ತ್ಯನು
ಸತ್ಯ ವಶಿಷ್ಠ ವಿಶ್ವಾಮಿತ್ರನು
ಯತಿಯ ಮಾಂಡವ್ಯ ದುರ್ವಾಸ ರೋಮಜ ಪರಾಸ ದಧೀಚಕನು
ನಿತ್ಯ ಮಾರ್ಕಂಡೇಯ ಶೃಂಗಿ ಉಪಮನ್ಯು
ಇತ್ತ ಜಯಮುನಿಶುಕ ಮೇರುವೆ
ಸುತ್ತಗವಿಗಳಾಶ್ರಮದಲ್ಲಿ ಮುನಿಗಳಿರುತಿಹರು
ಹಸಿದವನು ಉಣ್ಣನೊಲ್ಲೆವೆನುತಲಿ
ಹಸುವಿಗೆ ತರಗೆಲಿಯ ಮೆಲ್ಲುತ
ವಿಷಯ ಮಾಡುವಾಶ್ರಯರೊಲ್ಲದೆ ಗಿರಿಯ ಗಂಹರಿದ
ಹಸು ಮಕ್ಕಳಂತೆ ಗಂಬದ ಗತ್ತಲೆ
ರಸವನರಿದು ಸಿಂಧೂರ ಮಾಡಲು
ವಾಸವ ಮಾಡಿಕೊಂಡು ಗವಿಯ ತಪಸ್ವಿಗಳಿರಲು[೭]

"ಸಿದ್ಧರಾಮನು ಜೀವಂತ ಗವಿ ಪ್ರವೇಶ ಮಾಡಿದ ವಿಷಯ ಪ್ರಸಿದ್ಧವಾದುದು. ನಂದಿಯಾಗಮ ಲೀಲೆಯ ಪ್ರಕಾರ ಕಲ್ಯಾಣದ ಬಸವಣ್ಣ ಕೂಡಲಸಂಗಮದಲ್ಲಿ ಗವಿ ಪ್ರವೇಶಿಸುತ್ತಾನೆ. ಕಲ್ಯಾಣದಲ್ಲಿ ಗವಿಗಳೇ ವಿಶೇಷವಾಗಿರುವುದನ್ನು ಕಾಣಬಹುದು. ಇಂಗಳೇಶ್ವರದಲ್ಲಿ ರೇವಣಸಿದ್ಧ ಅಕ್ಕನಾಗಮ್ಮರ ಗವಿಗಳಿರುವುದನ್ನು ನೆನೆಯಬಹುದು"[೮]

ಗವಿಯ ಸಂಗಮ ರುದ್ರಪಾದವು
ಸವನ ನದಿಯೊಳು ಕೂಡಲೇಶ್ವರ
ಅವನಿಯೊಳು ಮಹಾಪುಣ್ಯಕ್ಷೇತ್ರ ಪುರಾಣ ಪ್ರಸಿದ್ಧಿ
ಭುವನಕ್ಕೆ ಹೆಪ್ಪ ಕೊಟ್ಟ ಸ್ಥಾನವು
ಪವಿತ್ರ ಜನ್ಮವ ಮಂಡೆ ಮಜ್ಜನ
ಅವಧರಿಸಿ ಸ್ನಾನವನು ಮಾಡಿದ ದಾನಧರ್ಮವನು

ಹರಿದುಕೊಟ್ಟ ಸಂಗ ಐವರಿಗೆ
ಶಿರದ ಮೇಲಿಟ್ಟುಕೊಂಡು ಶರಣನೆ
ಕರದಿಗಲ್ಲವ ಅಲುಗಿ ಅಳಿಯನ ಅಪ್ಪಿ ತರ್ಕೈಸೆ
ತಿರುಗಿ ದಡೆದರು ಕಲ್ಯಾಣಕ್ಕಾಗಿ
ಶರಣರ ದೇವ ಬಂದ ಕಪ್ಪಡಿಗೆ
ತೆರೆದ ಗವಿಯ ಬಾಗಿಲ ಮುಂದೆ ನಿಂದುಸ್ತುತಿಸುತಲಿ
ನದಿಯು ಕೃಷ್ಣವೇಣಿಯೊಳಗೆ
ಒದಗಿ ಬರುವ ಭಾಗೀರಥಿಯು
ಅದಬ್ಬದಾದರೆ ಮೂರು ಒಂದಾಗಿ ಕೂಡಿ ಬರುತಿರಲು
ಮುದದಿ ಮಲಪಹರಿಯ ಬೆರದಲಿ
ಸದಮಲ ಸಂಗಯ್ಯ ಕಪ್ಪಡಿ
ನದಿಯ ಕ್ಷೇತ್ರವು ಪಂಚಲಿಂಗ ಸ್ಥಾನಕ ಗವಿಯ ಒಪ್ಪಿಹದು
ನಿಂದು ಸ್ತುತಿಯನು ಮಾಡಲಾಕ್ಷಣ
ಹೊಂದಿಸಿದ ಶಿಲೆ ಕಡೆಗೆ ಆಗಲು
ಮುಂದೆ ಗವಿಯ ಕವಾಟತೆರೆದು ಮಾರ್ಗವೈದಿರೆ
ನಂದಿ ಹೋಗಲು ಸಾರ್ತವಾಯಿತು
ಚಂದ್ರ ಕಿರಣವು ಪ್ರಭೆಯೊ ಗುಹೆಯೊಳು
ಅಂಧಕಾವಳವಡದು ರಶ್ಮಿಯು ಹರಿದು ಪ್ರಜ್ವಲಿಸೆ[೧೦]

ಗುಂಡಬಸವೇಶ್ವರ ಚರಿತ್ರೆಯಲ್ಲಿಯೂ ಇಂಥಹ ಗವಿ ಸಂಸ್ಕೃತಿಯ ಪ್ರಸ್ತಾಪ ಹೀಗಿದೆ.

ಎಲ್ಲಿ ಮಾಡಲಿ ಗವಿಯನು ಎಂದುಯೆನುತಲಿ
ಮೆಲ್ಲನೆ ಕೇಳಿದುಪ್ಪಾರ

ಸೊಲ್ಲಿಸಿದನು ತಾನು ತಿಪ್ಪಣಯ್ಯಗಳೆಡ

ದಲ್ಲಿ ಬೀಡಾರ ಮಾಡೆನುತ[11]

ಈ ಮೇಲಿನ ಕೃತಿಗಳ ಉಲ್ಲೇಖವಲ್ಲದೆ ಬಸವ ಕಲ್ಯಾಣದಲ್ಲಿಯ ಶರಣರ ಕವಿಗಳು, ದಿಗ್ಗಿ ಸಂಗಮನಾಥನ ಗುರುವೆಂದು ಹೇಳುವ ಪರಮಾನಂದರ ಸ್ಥಳ ಹೆಬ್ಬಾಳದಲ್ಲಿ ಬೆಟ್ಟದ ಮೇಲಿನ ಗವಿ, ಕೊಡೇಕಲ್ಲ ಬಸವಣ್ಣನ ದೇವಸ್ಥಾನದಲ್ಲಿಯ ಗವಿ, ದಿಗ್ಗಿ ಸಂಗಮನಾಥನ ದೇವಾಲಯದ ಗವಿ, ಹಾಗೆಯೇ ಪ್ರಭಾವಕ್ಕೆ ಒಳಗಾದ ತಿಂಥಣಿ ಮೋನಪ್ಪಯ್ಯನ ದೇವಾಲಯದ ಗವಿಗಳು, ಕಲ್ಯಾಣದ ಗವಿ ಸಂಸ್ಕೃತಿಯ ವಾರಸುದಾರರಂತೆ ದಿಗ್ಗಿ ಸಂಗಮನಾಥ ಹಾಗೂ ಅವನ ಪರಿಸರದವರು ಕಂಡುಬರುತ್ತಾರೆ.

**ಕೊನೆಯ ಟಿಪ್ಪಣಿಗಳು**

೧. ಗುಂಡಬಸವೇಶ್ವರ ಚರಿತ್ರೆ (ಸಂ) ಡಾ. ಎಂ.ಎಂಕಲ್ಬುರ್ಗಿ ಸಂಗಪ್ಪಯ್ಯಸ್ವಾಮಿ, ಪುಟ xxviii

೨. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ ಮಠ, ಪುಟ ೨೦೨

೩. ಅದೇ ಪುಟ ೨೨೩

೪. ಅದೇ ಪುಟ ೨೨೪

೫. ಅದೇ ಪುಟ ೧೦೬

೬. ಅದೇ ಪುಟ ೧೦೬

೭. ಅದೇ ಪುಟ ೧೧೧

೮. ಗುಂಡಬಸವೇಶ್ವರ ಚರಿತ್ರೆ (ಸಂ) ಡಾ. ಎಂ.ಎಂ.ಕಲಬುರ್ಗಿ, ಸಂಗಪ್ಪಯ್ಯಸ್ವಾಮಿ, ಪುಟ xxviii

೯. ನಂದಿಯಾಗಮಲೀಲೆ (ಸಂ) ಆಯ್.ಜಿ.ಕೊಡೇಕಲ್ ಮಠ, ಪುಟ ೧೯

೧೦. ಅದೇ ಪುಟ ೧೦೬

೧೧. ಗುಂಡಬಸವೇಶ್ವರ ಚರಿತ್ರೆ (ಸಂ) ಡಾ. ಎಂ.ಎಂ.ಕಲಬುರ್ಗಿ, ಸಂಗಪ್ಪಯ್ಯಸ್ವಾಮಿ, ಪುಟ ೧೨೭

# ಅಧ್ಯಾಯ ೯

# ಸಮಾರೋಪ

'ದಿಗ್ಗಿ ಸಂಗಮನಾಥ: ಒಂದು ಅಧ್ಯಯನ' ಎಂಬ ಈ ಕಿರುಪ್ರಬಂಧವು ಕಾವ್ಯ, ವಚನ, ಚರಿತ್ರೆ ಮತ್ತು ಸ್ಥಳಪುರಾಣ ಹಾಗೂ ಆಚರಣೆಗಳ ಹಿನ್ನಲೆಯಲ್ಲಿ ಸಿದ್ಧಗೊಂಡಿದೆ. ಸ್ಥಳೀಯ ಚರಿತ್ರೆಯ ಕಡೆಗೆ ಇತ್ತೀಚಿನ ವಿದ್ವಾಂಸರ ಗಮನ ಹೆಚ್ಚು ಹರಿಯುತ್ತಲಿದೆ. ಹೀಗಾಗಿ ಮಹತ್ವದ ಅಧ್ಯಯನಗಳ ಜೊತೆ ಜೊತೆಗೆ ಸ್ಥಳೀಯ ಇಲ್ಲವೇ ಪ್ರಾದೇಶಿಕ ಅಧ್ಯಯನಗಳು ನಡೆಯುವುದರ ಮೂಲಕ ಒಂದು ಪರಿಸರದ ಸಮಗ್ರ ಅಧ್ಯಯನ ಸಾಧ್ಯವಾಗುತ್ತದೆ. ಅಂತಹ ಮಹತ್ವದ ಸದಾಶಯದಿಂದ ಕೈಗೊಂಡ ಅಧ್ಯಯನ "ದಿಗ್ಗಿ ಸಂಗಮನಾಥ."

೧. ಗುಲ್ಬರ್ಗಾ ಜಿಲ್ಲೆಯ ಕೃಷ್ಣಾ ಮತ್ತು ಭೀಮಾ ನದಿಯ ನಡುವಿನ ಭೌಗೋಳಿಕ ಪ್ರದೇಶವೇ ಸಗರನಾಡು. ಈ ಸಗರನಾಡಿನ ನೆಲ, ಜಲ, ರಾಜಕೀಯ, ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ವಿಚಾರಧಾರೆಗಳು ಐತಿಹಾಸಿಕವಾದವುಗಳು. ವಿಶೇಷವಾಗಿ ೧೨ನೇ ಶತಮಾನದ ಕಲ್ಯಾಣ ಕ್ರಾಂತಿಯ ನಂತರ ಸಾಮಾಜಿಕವಾಗಿ, ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಮತ್ತೆ ಶರಣ ಚಿಂತನೆಯನ್ನು ಕರಾರುವಕ್ಕಾಗಿ ಆಚರಿಸಿಕೊಂಡು ಬಂದ ಕೀರ್ತಿ ಸಗರನಾಡಿನ ಪರಿಸರದ ಕೊಡೇಕಲ್ಲ, ದಿಗ್ಗಿ, ಹೆಬ್ಬಾಳ, ಜಲದುರ್ಗ ಮುಂತಾದವುಗಳಿಗೆ ಸಲ್ಲುತ್ತದೆ.

ದೇವದುರ್ಗದ ಮೇಲೆ ದೇವ ಸಿಂಹಾಸನ
ದೇವೇಶ ಬಸವನ ವರದಿಂದ ಬೇಡಾರ
ಜೀವ ನೆಲವೊಂದೆ!

ಅಂದರೆ ಕೃಷ್ಣಾ ನದಿಯು ೧೪ ಟಿಸಿಲುಗಳಾಗಿ ಹರಿಯುವ ನೀರಿನಿಂದ ಆವೃತ್ತವಾಗಿರುವ ಸ್ಥಳವೇ ಜಲದುರ್ಗ. ಇದನ್ನು ದೇವದುರ್ಗವೆಂದು ಕರೆಯುತ್ತಾರೆ. ನಮ್ಮ ಅಧ್ಯಯನದ ದಿಗ್ಗಿ ಸಂಗಮನಾಥನ ರತ್ನ ಸಿಂಹಾಸನ ಎನಿಸಿಕೊಂಡಿತ್ತು ಜಲದುರ್ಗ. ಇಲ್ಲಿಂದಲೇ ಕಾಲಜ್ಞಾನಿ ಸಂಗಮನಾಥ ಕೊಡೇಕಲ್

ಗ್ರಾಮಕ್ಕೆ ಬಂದನೆಂದು ಪ್ರತೀತಿ. ಈ ಪ್ರತೀತಿಗೆ ಪುಷ್ಟಿ ಕೊಡುವಂತೆ ಈಗಲೂ ಜಲದುರ್ಗದಲ್ಲಿ ಒಂದು ಬಂಡೆಯನ್ನು ತೋರಿಸಿ ವಚನಗಳನ್ನು ಬಚ್ಚಿಟ್ಟ 'ಪೆಟಾರಿಕಿಗುಂಡು' ಎಂದು ತೋರಿಸುತ್ತಾರೆ. ಅದೇನೆ ಇರಲಿ ಸಗರನಾಡಿನ ಪರಿಸರದ ಅಧ್ಯಯನ ಹನ್ನೆರಡನೆಯ ಶತಮಾನದ ಶರಣ ಚಿಂತನೆಯ ಅಧ್ಯಯನವೇ ಆಗಿದೆ ಎಂಬುದನ್ನು ಇಲ್ಲಿ ಅಭಿಪ್ರಾಯಪಡಲಾಗಿದೆ.

೨. ಇದುವರೆಗಿನ ವಿದ್ವಾಂಸರ ಅಧ್ಯಯನಗಳಿಂದ ಕೊಡೇಕಲ್ಲ ಅಮರಕಲ್ಯಾಣವೆಂದು ಭಾವಿಸಲಾಗಿತ್ತು. ಆದರೆ ಇತ್ತೀಚಿಗೆ ದೊರೆತ ಗುಂಡಬಸವೇಶ್ವರ ಚರಿತ್ರೆಯಿಂದ ಶಹಾಪೂರ ತಾಲೂಕಿನ ದಿಗ್ಗಿ ಅಮರಕಲ್ಯಾಣವೆಂಬುದು ತಿಳಿದುಬರುತ್ತದೆ.

ಕೇಳು ನೀ ಬಸವಣ್ಣ ಹೇಳುವ ಮಾತನು
ಭಾಳಲೋಚನ ಭಕ್ತನೊಬ್ಬ
ಹಳೆಯಸಗರದ ಹೊರಗೆ ಮಠಕಟ್ಟಿ
ಇಳೆಯೊಳಮರಕಲ್ಯಾಣವೆನಿಸಿ

ಈ ಮೇಲಿನ ಹಾಡಿನಲ್ಲಿ ದಿಗ್ಗಿ ಸಂಗಮನಾಥ ಈಗಿನ ಸುರಪುರ ಬಳಿಯ ದಿಗ್ಗಿಯಲ್ಲಿ ಅಮರಕಲ್ಯಾಣವನ್ನು ನಿರ್ಮಿಸಿ ವರ್ಷಕ್ಕೆ ನಾಲ್ಕು ಉತ್ಸವ ತಿಥಿಗಳನ್ನು ನಿರ್ಧರಿಸಿ ಭಕ್ತರು, ಬೋಳರು ಎಂಬ ಅನುಯಾಯಿಗಳನ್ನು ಹುಟ್ಟುಹಾಕಿ ಡಂಗುರ ಸಾರುತ್ತಿದ್ದನು ಎಂಬುದಾಗಿ ತಿಳಿದುಬರುತ್ತದೆ. ಹೀಗಾಗಿ ಅಮರಕಲ್ಯಾಣ ಹೆಸರಿನಿಂದ ಮೆರೆದ ದಿಗ್ಗಿಯ ಸಂಗಮನಾಥ ದೇವಸ್ಥಾನದ ಪಕ್ಕದ ನಿಬಿಡಾದ ಜಾಗವೊಂದನ್ನು ಈಗಲೂ ಜನ ಅಮರಕಲ್ಯಾಣವೆಂದು ಕರೆಯುತ್ತಿರುವುದು ಈ ಅಂಶಕ್ಕೆ ಪುಷ್ಟಿ ದೊರೆಯುತ್ತದೆ.

೩. ಕೊಡೇಕಲ್ಲ ಬಸವಣ್ಣನ ಕಾಲಜ್ಞಾನ ಸಾಹಿತ್ಯ, ವಚನಸಾಹಿತ್ಯ, ಆತನ ಪರಂಪರೆಯವರಾದ ರಾಚಪ್ಪಯ್ಯ, ವೀರಸಂಗಪ್ಪಯ್ಯ ಮುಂತಾದವರು ಬರೆದ ಸಾಹಿತ್ಯವನ್ನು ಬಳಸಿಕೊಂಡು ದಿಗ್ಗಿ ಸಂಗಮನಾಥನ ಚಾರಿತ್ರಿಕ ವ್ಯಕ್ತಿತ್ವವನ್ನು ನಿರೂಪಿಸಲಾಗಿದೆ.

೪. ಸಂಗಮನಾಥನನ್ನು ಕೇಂದ್ರವಾಗಿಟ್ಟುಕೊಂಡು ಅಮರಕಲ್ಯಾಣ, ಧರ್ಮಕಲ್ಯಾಣ ಮತ್ತು ಕಡೆಯಕಲ್ಯಾಣದ ಶರಣರ ಸಾಧನೆಗಳನ್ನು ನಿರೂಪಿಸುವುದರ ಮೂಲಕ ದಿಗ್ಗಿ ಅತ್ತ ಬಸವಕಲ್ಯಾಣದ ಇತ್ತ ಕೊಡೇಕಲ್ ಪರಂಪರೆಯ ನೇತಾರನಾಗಿ ಕಂಗೊಳಿಸಿದ ಅಂಶವನ್ನು ಶೋಧಿಸಲಾಗಿದೆ.

ಕೊಡೇಕಲ್ ಬಸವಣ್ಣ ದೇಶ ಪರ್ಯಟನೆ ಮಾಡುತ್ತಾ ಅಮರಕಲ್ಯಾಣಕ್ಕೆ ಬರುತ್ತಾನೆ. ಆ ಹೊತ್ತಿಗಾಗಲೇ ದಿಗ್ಗಿ ಸಂಗಮನಾಥ ತೀರಿಹೋಗಿದ್ದ(ನಂದಿಯಾಗಮಲೀಲೆ ೧೪-೧೦). ಆತನ ಗದ್ದಿಗೆ ದರ್ಶನ ಮಾಡಿಕೊಂಡು ನಾಗಾವಿಗೆ ಬರುತ್ತಾನೆ. ಅಲ್ಲಿಯ ಧರ್ಮಕಲ್ಯಾಣದ ಅಧಿಪತಿಯಾದ

ಗುಂಡಬಸಪ್ಪನ ಮನೆಗೆ ಹೋಗಿ ಭಿಕ್ಷೆ ಬೇಡುತ್ತಾನೆ. ನಂತರ ದೇಶ ಸಂಚಾರ ಮಾಡಿಕೊಂಡು ಬಂದ ಬಸವಣ್ಣ ಕೊಡೇಕಲ್ಲಿನಲ್ಲಿ ಸಿಂಹಾಸನಾರೂಢನಾಗುತ್ತಾನೆ. ಈ ಅಂಶದಿಂದ ಸಂಗಮನಾಥ ಈ ವೇಳೆಗಾಗಲೇ ಕಾಲವಾಗಿದ್ದನು ಮತ್ತು ಕೊಡೇಕಲ್ಲ ಬಸವಣ್ಣನಿಗಿಂತಲೂ ಗುಂಡ ಬಸವಣ್ಣ ಒಂದಿಷ್ಟು ದೊಡ್ಡವನು. ಈ ಅಂಶಗಳಿಂದ ಬಸವಕಲ್ಯಾಣ ಸಮಯ ಕಲ್ಯಾಣವಾಗಿ, ಹಂಪಿ ವಿಜಯ ಕಲ್ಯಾಣವಾಗಿ, ದಿಗ್ಗಿ ಅಮರಕಲ್ಯಾಣವಾಗಿ, ನಾಗಾವಿ ಧರ್ಮಕಲ್ಯಾಣವಾಗಿ ಕೊನೆಗೆ ಕೊಡೇಕಲ್ ಕಡೆಯ ಕಲ್ಯಾಣವಾಗಿ ಅಸ್ತಿತ್ವಕ್ಕೆ ಬಂದ ಐತಿಹಾಸಿಕ ಸಂಗತಿಯನ್ನು ಈ ಪ್ರಬಂಧದಲ್ಲಿ ದಾಖಲಿಸಲಾಗಿದೆ.

೫. ಇಂದು ಜನಪದ ಆಚರಣೆಗಳು ಕಣ್ಮರೆಯಾಗುತ್ತಿವೆ. ಹೀಗಾಗಿ ದಿಗ್ಗಿ ಸಂಗಮನಾಥನ ಕುರಿತು ಪಲ್ಲಕ್ಕಿ, ಉತ್ಸವ, ರಥೋತ್ಸವ ಇಂತಹ ಆಚರಣೆಗಳನ್ನು ಇಲ್ಲಿ ಪ್ರಸ್ತುತಪಡಿಸಲಾಗಿದೆ.

೬. ಕಲ್ಯಾಣ ಸಂಸ್ಕೃತಿಯಲ್ಲಿ ಗುಹೆಗಳಿಗೆ ಮಹತ್ವದ ಸ್ಥಾನವಿದೆ. ಈ ಮಾತಿಗೆ ಪುಷ್ಟಿಕೊಡುವಂತೆ ದಿಗ್ಗಿ ಸಂಗಮನಾಥನ ಗವಿ, ಆತನ ಗುರು ಪರಮಾನಂದರ ಗವಿ, ಆತನ ಶಿಷ್ಯ ಕೊಡೇಕಲ್ ಬಸವಣ್ಣನ ಗವಿ ಹೀಗೆ ಬಸವಕಲ್ಯಾಣದಿಂದ ಹಿಡಿದು ಸಗರನಾಡಿನ ಪರಿಸರದ ಗವಿ ಸಂಸ್ಕೃತಿಯ ಮಹತ್ವವನ್ನು ವಿವೇಚಿಸಲಾಗಿದೆ. ಒಟ್ಟಿನಲ್ಲಿ ಕರ್ನಾಟಕದ ವಚನ ಚಳುವಳಿಯ ವೈಚಾರಿಕ ಕ್ರಾಂತಿಗೆ ಆಧ್ಯಾತ್ಮಿಕ ಸ್ಪರ್ಶವನ್ನು ನೀಡಿದ ದಿಗ್ಗಿ ಸಂಗಮನಾಥ ವಿಶೇಷವಾಗಿ ನಾಥ, ಆರೂಢ, ಅವಧೂತ ಸಮ್ಮಿಶ್ರ ಪಂಥವನ್ನು ಹುಟ್ಟುಹಾಕಿದ ಚಾರಿತ್ರಿಕ ಅಂಶಗಳನ್ನು ಒಳಗೊಂಡ ಅಧ್ಯಯನ ಇದಾಗಿದೆ.

# ಅನುಬಂಧಗಳು

೧. ಭಾವಚಿತ್ರಗಳು
೨. ವಕ್ರ ವಿವರಗಳು
೩. ಗ್ರಂಥಋಣ

ಸಂಗಮನಾಥನ ರಥೋತ್ಸವದ ಮಿಣಿಆಚರಣೆ



ಸಂಗಮನಾಥನ ರಥ

ಸಂಗಮನಾಥನ ಶಿಷ್ಯ ಕೊಡೇಕಲ್ ಬಸವಣ್ಣನ
ದೇವಸ್ಥಾನ

ಕೊಡೇಕಲ್ ಬಸವಣ್ಣಾ ದೇವಸ್ಥಾನದ
ದರ್ಮಾಧಿಕಾರಿಗಳು

ದಿಗ್ಗಿ ಸಂಗಮನಾಥನ ದೇವಾಲಯ  ಜಲದುರ್ಗ

ಸಂಗಮನಾಥನ ಗದ್ದಿಗೆ ಜಲದುರ್ಗ

## ೨. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧. | ದೇವಯ್ಯಸ್ವಾಮಿ | ೫೦ | ಅರ್ಚಕ | ದಿಗ್ಗಿ |
| ೨. | ದೇಸಾಯಿ ಜಿ.ಎಸ್. | ೬೮ | ನಿವೃತ್ತ ಶಿಕ್ಷಕರು | ಶಹಾಪೂರ |
| ೩. | ಪ್ರಭು ಬ. ಪೂಜಾರ | ೩೫ | ಅರ್ಚಕ | ಕೊಡೇಕಲ್ |
| ೪. | ಬಸವರಾಜಪ್ಪಯ್ಯ | ೬೦ | ಅರ್ಚಕ | ಜಲದುರ್ಗ |
| ೫. | ಬಸಣ್ಣ ನರಗೋಳಿ | ೭೫ | ಕೃಷಿ | ದಿಗ್ಗಿ |
| ೬. | ಭೀಮರಾಯ ಪ್ಯಾಟಿ | ೭೫ | ಕೃಷಿ | ದಿಗ್ಗಿ |
| ೭. | ಮಲ್ಲಣ್ಣ ಸೌದಿ | ೬೦ | ಕೃಷಿ | ದಿಗ್ಗಿ |
| ೮. | ವೀರಯ್ಯಸ್ವಾಮಿ ಮಹಲಿನಮಠ | ೬೦ | ಧರ್ಮಾಧಿಕಾರಿ | ಕೊಡೇಕಲ್ |
| ೯. | ಸಂಗಣ್ಣ ಪ್ಯಾಟಿ | ೪೮ | ಕೃಷಿ | ದಿಗ್ಗಿ |

# ೩. ಗ್ರಂಥಋಣ

೧. ಅಮರೇಶ ನುಗಡೋಣಿ- ಹೈದರಾಬಾದು ಕರ್ನಾಟಕ ಹಾಡು ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೨. ಅಶೋಕ ನರೋಡೆ ಮತ್ತು ವಿಜಯಕುಮಾರ ಕಟಗಿಹಳ್ಳಿಮಠ- (ಸಂ) ನಿರುಪಾಧಿ ಅಭಿನಂದನ ಗ್ರಂಥ, ಪ್ರಕಾಶಕರು, ಮರೆಗುದ್ದಿಯ ಪೂಜ್ಯ ಶ್ರೀ ನಿರುಪಾಧೀಶ ಮಹಾಸ್ವಾಮಿಗಳ ಅಭಿನಂದನ ಸಮಿತಿ, ಮುಧೋಳ, ೨೦೦೬.

೩. ಇರಸಂಗಯ್ಯ ಜಿ. ಕೊಡೇಕಲ್‌ಮಠ- (ಸಂ) ನಂದಿಯಾಗಮಲೀಲೆ, ಪ್ರಕಾಶಕರು: ಶ್ರೀ ಕೊಡೇಕಲ್ಲ ಬಸವೇಶ್ವರ ಅಧ್ಯಯನ ಸಂಸ್ಥೆ, ಕೊಡೇಕಲ್ಲ, ೨೦೦೪.

೪. ಕಲಬುರ್ಗಿ ಎಂ.ಎಂ. ಮತ್ತು ಸಂಗಪ್ಪಯ್ಯ ಸ್ವಾಮಿ- (ಸಂ) ಗುಂಡಬಸವೇಶ್ವರ ಚರಿತ್ರೆ, ಕರ್ನಾಟಕ ಸರ್ಕಾರ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭.

೫. ಕಪಟರಾಳ ಕೃಷ್ಣರಾಯ- ಸುರಪುರ ಸಂಸ್ಥಾನದ ಇತಿಹಾಸ ಕಪಟರಾಳ ಕೃಷ್ಣರಾಯರ ಸ್ಮಾರಕ ಸಮಿತಿಗಾಗಿ ಪುಸ್ತಕ, ಶಕ್ತಿ ಪ್ರಕಾಶನ, ಬೆಂಗಳೂರು, ೨೦೦೬.

೬. ಕಲಬುರ್ಗಿ ಎಂ.ಎಂ.- ಮಾರ್ಗ (ಸಂ) ೩, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೧೯೯೮.

೭. ಬಸವಲಿಂಗ ಸೊಪ್ಪಿಮಠ- (ಸಂ) ಕೊಡೇಕಲ್ ವಚನ ವಾಕ್ಯ ಸಂಪುಟ-೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೮. ಬಸವಲಿಂಗ ಸೊಪ್ಪಿಮಠ- ಕೊಡೇಕಲ್ ಬಸವಣ್ಣ: ಒಂದು ಅಧ್ಯಯನ ಕೊಡೇಕಲ್ ಬಸವೇಶ್ವರ ಅಧ್ಯಯನ ಸಂಸ್ಥೆ, ಕೊಡೇಕಲ್ಲು, ೧೯೯೫.

೯. ರವೀಂದ್ರನಾಥ ಕೆ. (ಸಂ) ಬಸವಯುಗದ ವಚನೇತರ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

